ದ.ರಾ.ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಗ್ರಂಥಮಾಲೆ : ಎಂಟು

# ಕಂಪಿನ ಕರೆ

## ಬೇಂದ್ರೆ ಕಾವ್ಯದೃಷ್ಟಿಯ ಅಧ್ಯಯನ

ಗೌರೀಶ ಕಾಯ್ಕಿಣಿ

ಪ್ರಸಾರಾಂಗ
ದ.ರಾ.ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್
ಧಾರವಾಡ
೨೦೧೧

KAMPINA KARE (A Study of Da Ra. Bendre's View of Poetry in Kannada.) by : Gourish Kaikini(1912-2002)

Editor : Dr. M.G.Hegade, Kumata(N.K)

Publishers : Prasaranga, Da.Ra.Bendre Rastreeya Smaraka Trust,
Sadhanakeri, Dharwad-580008

Edition : 26th October 2011

ISBN: 978-81-910400-2-9
Copies : 1000

Pages : xii +160

Price : Rs. 60/-



**ಕಂಪಿನ ಕರೆ**

ಲೇಖಕರು : **ಗೌರೀಶ ಕಾಯ್ಕಿಣಿ, ಗೋಕರ್ಣ**

ಸಂಪಾದಕರು : ಡಾ. ಎಂ. ಜಿ. ಹೆಗಡೆ, ಕುಮಟಾ

ಪ್ರಕಾಶಕರು : ಪ್ರಸಾರಾಂಗ,
ದ.ರಾ.ಬೇಂದ್ರೆ ರಾಷ್ಟ್ರೀಯ ಸ್ಮಾರಕ ಟ್ರಸ್ಟ್
ಸಾಧನಕೇರಿ, ಧಾರವಾಡ-೫೮೦೦೦೮

ಪ್ರಥಮ ಮುದ್ರಣ : ೨೬ ಅಕ್ಟೋಬರ್ ೨೦೧೧

ಪ್ರತಿಗಳು : ೧೦೦೦

ಪುಟಗಳು : xii +೧೬೦
ಬಳಸಿದ ಕಾಗದ : ೭೦ ಜಿಎಸ್ಎಂ. ಎನ್.ಎಸ್. ಮ್ಯಾಪ್‌ಲಿಥೋ ಕಾಗದ

ಬೆಲೆ : ರೂ. ೬೦/-



ಮುದ್ರಕರು : ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ

## ‘ವಿಶ್ವದೊಳನುಡಿಯಾಗಿ ಕನ್ನಡಿಸುತಿಹನು.....’

ಹೋದ ಶತಮಾನದ ಎರಡನೆಯ ದಶಕದ ಹೊತ್ತಿಗೆ ಕರ್ನಾಟಕದಲ್ಲಿ ನವೋದಯದ ಬೆಳಗಾಯಿತು. ಇಂಗ್ಲೀಷಿನ ಆಧುನಿಕ ಬೆಳಕು, ಸಂಸ್ಕೃತ ಅಭಿಜಾತದ ದಟ್ಟ ನೆರಳು ಕನ್ನಡದ ಮೇಲೆ ಬಿದ್ದ ಪರಿಣಾಮವಾಗಿ ಹೊಸಗನ್ನಡ ಸಾಹಿತ್ಯ ವೈವಿಧ್ಯಮಯವಾಗಿ ರೂಪುಗೊಳ್ಳುವ ವಾತಾವರಣ ಮೂಡತೊಡಗಿತು. ನುಡಿಯ ಉನ್ನತಿ, ನಾಡಿನ ಏಕೀಕರಣ, ರಾಷ್ಟ್ರ ಸ್ವಾತಂತ್ರ್ಯದ ಹಂಬಲ ಆ ಬೆಳಕಿನಲ್ಲಿ ನಡೆಯುವವರಿಗೆ ಕಂಡ ಉಜ್ವಲ ಮಹತ್ವಾಕಾಂಕ್ಷೆಗಳು.

ಅಂತಹ ಮುಂಬೆಳಗಿನ ಹೊತ್ತಿಗೆ ಒಬ್ಬ ಸಾಮಾನ್ಯ ವ್ಯಕ್ತಿಯಾಗಿ ಧಾರವಾಡದಲ್ಲಿ ಹುಟ್ಟಿದ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ‘ಅಂಬಿಕಾತನಯದತ್ತ’ನೆಂಬ ಕಾವ್ಯ ಶಕ್ತಿಯಾಗಿ, ಮೇಧಾವಿ ವ್ಯಕ್ತಿಯಾಗಿ ರೂಪುಗೊಂಡಿದ್ದು ‘ಭುವನದ ಭಾಗ್ಯ’.

ಗೆಳೆಯರ ಗುಂಪುಕಟ್ಟಿ ‘ಬಾರೋ ಸಾಧನಕೇರಿಗೆ.....’ ಎಂದು ಯುವಕರನ್ನು, ರಸಿಕರನ್ನು, ನವಜೀವನದ ಆಸಕ್ತರನ್ನು, ಸಾಹಿತ್ಯದ ಅನುರಕ್ತರನ್ನು ಕರೆದ ವರಕವಿಗಳು ಅವರೆಲ್ಲರೊಂದಿಗೆ ‘ವಿಶ್ವದೊಳನುಡಿಯಾಗಿ ಕನ್ನಡಿಸುವ’ ಕಾವ್ಯ ಕರ್ಮದಲ್ಲಿ ನಿರತರಾದರು.

ಬೇಂದ್ರೆ ಕಾವ್ಯವು ಶತಮಾನದುದ್ದಕ್ಕೂ ಪ್ರಭಾವಿಸಿದ್ದು ಸಾಹಿತ್ಯೇತಿಹಾಸದ ಒಂದು ದಾಖಲೆಯಾಗಿ ಮಾತ್ರ ಇರುವಂತಹುದಲ್ಲ. ಇಂದಿನ ಬಹುಮುಖಿಯಾದ ಜೀವನಕ್ಕೆ ಬೇರೆ ಬೇರೆ ಮಾಧ್ಯಮಗಳಿಂದ, ಕಲಾಭಿವ್ಯಕ್ತಿಯ ವಿವಿಧ ಆಯಾಮಗಳ ಮೂಲಕ ತಲುಪಿಸಬೇಕು ಮತ್ತು ಈ ಜನಪರಕವಿಯ ಸಾಧನೆಗಳನ್ನು ಧನ್ಯಭಾವದಿಂದ ನೆನೆಸುತ್ತಿರಬೇಕು, ಎಂಬ ಧ್ಯೇಯೋದ್ದೇಶದಿಂದ ಸಂಸ್ಕೃತಿ ಪ್ರಸಾರ ಪರವಾದ ಕರ್ನಾಟಕ ಸರಕಾರ ಧಾರವಾಡದಲ್ಲಿ ‘ಟ್ರಸ್ಟ್’ನ್ನು ಸ್ಥಾಪಿಸಿದೆ (೧೯೯೩). ಈ ಧ್ಯೇಯಗಳ, ಅನುಷ್ಠಾನಗಳ ಕೇಂದ್ರವಾಗಿ ‘ಬೇಂದ್ರೆ ಭವನ’ವನ್ನು ನಿರ್ಮಿಸಿದೆ. (೧೯೯೯).

ವರ್ತಮಾನದ ಕನ್ನಡ ಮತ್ತು ಸಂಸ್ಕೃತಿ ವಾತಾವರಣವನ್ನು ಕ್ರಿಯಾಶೀಲವೂ ಅಧ್ಯಯನ ಶೀಲವೂ ಆಗಿ ಬೆಳೆಸುವುದಕ್ಕೆ ಟ್ರಸ್ಟ್, ವಿವಿಧ ಬಗೆಯ ಕಾರ್ಯಕ್ರಮಗಳನ್ನು, ಯೋಜನೆಗಳನ್ನು ರೂಪಿಸಿದೆ. ೨೦೦೬ರಲ್ಲಿ ಆರಂಭವಾದ

ಪ್ರಸಾರಾಂಗ, ಅಧ್ಯಯನಶೀಲ ಪುಸ್ತಕಗಳನ್ನು ಪ್ರಕಟಿಸುತ್ತಿದ್ದು ಈಗಾಗಲೇ ಏಳು ಕೃತಿಗಳು ಬಂದಿವೆ. ಗೌರೀಶ ಕೈಕಿಣಿಯವರ 'ಕಂಪಿನಕರೆ'(೧೯೮೦) ಬೇಂದ್ರೆ ಕಾವ್ಯದ ಗಂಭೀರ-ವೈವಿಧ್ಯ ಮತ್ತು ವಿಸ್ತಾರ ಅಧ್ಯಯನದ ಕೃತಿಯಾಗಿದ್ದು, ರಸಿಕರ, ಅಭ್ಯಾಸಿಗಳ ಪ್ರೀತಿ ಆದರಗಳನ್ನು ಗಳಿಸಿದೆ. ಮೊದಲ ಸಲ ಈ ಕೃತಿಯನ್ನು ಧಾರವಾಡದ ಸಮಾಜ ಪುಸ್ತಕಾಲಯದವರು 'ಆಧುನಿಕ ಕವಿ ಕಾವ್ಯಮಾಲೆಯಲ್ಲಿ ಪ್ರಕಟಿಸಿದರು. ಆಮೇಲೆ, ಅಂಕೋಲದ ಶ್ರೀ ರಾಘವೇಂದ್ರ ಪ್ರಕಾಶನದ ವಿಷ್ಣು ನಾಯಕರು "ಗೌರೀಶ ಕೈಕಿಣಿ ಸಮಗ್ರ ಸಾಹಿತ್ಯ" ಸಂಪುಟಗಳನ್ನು ಹೊರತರುವಾಗ, ಸಂಪುಟ-೪ (೧೯೯೫)ರಲ್ಲಿ 'ಕಂಪಿನಕರೆ'ಯನ್ನು ಮುದ್ರಿಸಿದರು. ಬೇಂದ್ರೆ-ಗೌರೀಶರ ಸ್ನೇಹ-ಸಂಪರ್ಕ ೪೦ವರ್ಷಗಳಷ್ಟು ಹಳೆಯದು. ಆಗಾಗ, ವರಕವಿಯನ್ನು ಸಾಹಿತ್ಯವನ್ನು ಅವರು ರಸಿಕನಾಗಿ ಪರಿಚಯಿಸುವ ಬರೆಹಗಳನ್ನೂ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. 'ಕಂಪಿನಕರೆ'ಯ ೧೯ ಅಭ್ಯಾಸಪೂರ್ಣ ಲೇಖನಗಳನ್ನು ಒಂದು ವಿಶಿಷ್ಟ ಧ್ಯಾನಕ್ರಮದಲ್ಲಿ ಬರೆದಿದ್ದಾರೆ. ಗೌರೀಶರಿಗೆ ಸಂತೃಪ್ತಿತಂದ ಬರವಣಿಗೆ ಇದು. ಗೌರೀಶರ ಜನ್ಮಶತಮಾನದ ಈ ವರ್ಷದಲ್ಲಿ ಬೇಂದ್ರೆ-ಗೌರೀಶರ ಕಾವ್ಯಾನುಸಂಧಾನವನ್ನು ನೆನೆಸುವ ಸಂದರ್ಭವಾಗಿ ಇದನ್ನು ದಾಖಲಿಸಲು ಟ್ರಸ್ಟ್ ಕಂಪಿನಕರೆಯ ಪುನರ್‌ಮುದ್ರಣವನ್ನು ಕೈಗೆತ್ತಿಕೊಂಡಿದೆ. ಇದನ್ನು ಸಂಪಾದಿಸಿ ಕೊಡುವುದಕ್ಕೆ ಕುಮಟಾದ ಡಾ. ಎಂ.ಜಿ.ಹೆಗಡೆಯವರು ಸಿದ್ಧರಾದರು. ಶ್ರೀ ಜಯಂತ ಕೈಕಿಣಿ ಮತ್ತು ಶ್ರೀಮತಿ ಶಾಂತಾ ಕೈಕಿಣಿಯವರು ಪ್ರಕಟಣೆಗೆ ಅನುಮತಿಕೊಟ್ಟರು. ಗೌರೀಶ ಸಾಹಿತ್ಯ ಬಳಗದ ಇವರೆಲ್ಲರಿಗೆ ಹೃತ್ಪೂರ್ವಕ ಧನ್ಯವಾದಗಳು.

ಪುಸ್ತಕದ ವಿನ್ಯಾಸವನ್ನು ರೂಪಿಸುವಲ್ಲಿ ನೆರವಾದ ಪ್ರಕಾಶ ಬಾಳಿಕಾಯಿ, ಕಿರಣ ತೋಟಗಂಟಿಯವರನ್ನು, ತ್ವರಿತಗತಿಯಲ್ಲಿ ಮುದ್ರಿಸಿಕೊಟ್ಟ ಅಶೋಕ ಖಟವಟೆ, ಪರಶುರಾಮ ಖಟವಟೆ ಬಂಧುಗಳನ್ನು ಕೃತಜ್ಞತಾಪೂರ್ವಕ ನೆನೆಯುತ್ತೇವೆ.

ಬೇಂದ್ರೆಭವನ
ಸಾಧನಕೇರಿ, ಧಾರವಾಡ

ಶ್ಯಾಮಸುಂದರ ಬಿದರಕುಂದಿ
ಅಧ್ಯಕ್ಷರು

## ಸಂಪಾದಕೀಯ

ಗೌರೀಶ ಕಾಯ್ಕಿಣಿಯವರು ಪ್ರಧಾನವಾಗಿ ತಮ್ಮನ್ನು 'ವಿಚಾರವಾದಿ' ಎಂದು ಕರೆದುಕೊಂಡರು. ಕನ್ನಡದಲ್ಲಿ ವಿಚಾರವಾದವೆಂಬ ಪರಿಕಲ್ಪನೆಯನ್ನು ಸೃಷ್ಟಿಸಿ, ನಿರ್ವಚಿಸಿ, ಪ್ರತಿಪಾದಿಸಿದರು. ತಾರ್ಕಿಕವಾದ ಬುದ್ಧಿಪ್ರಾಮಾಣ್ಯದ ನೀತಿಮತ್ತೆಯಲ್ಲಿ ವಿಶ್ವಾಸವಿಟ್ಟು ದೇವರು-ಧರ್ಮಗಳ ಅಧಿಷ್ಠಾನವನ್ನು ಪಾಪ-ಪುಣ್ಯಗಳ ಪರಿಮಾಣವನ್ನೂ ನಿರಾಕರಿಸಿದರು. ಅವರ ಬದುಕೇ ವ್ಯಾಸಂಗದ, ಜಿಜ್ಞಾಸೆಯ, ವಿಚಿಕಿತ್ಸೆಯ ಮಹಾಪ್ರಸ್ಥಾನವೆಂಬತ್ತಿತ್ತು. ಹೀಗಾಗಿ ಸಹಜವಾಗಿಯೇ ಅವರ ವ್ಯಕ್ತಿತ್ವದ ಈ ಮುಖ ಎದ್ದು ಕಾಣುವಂತಾಯಿತು.

ಆದರೆ ಗೌರೀಶರ ಆಸಕ್ತಿಯ ಲೋಕ ವಿಸ್ತಾರವಾದದ್ದು. ಶಿಕ್ಷಕ, ಶಿಕ್ಷಣತಜ್ಞ, ಪತ್ರಕರ್ತ, ಸಂಘಟಕ, ರಾಜಕೀಯ ವ್ಯಾಖ್ಯಾನಕಾರ, ಸಾಹಿತ್ಯ ವಿಮರ್ಶಕ ಹಾಗೂ ಮೀಮಾಂಸಕಾರ, ನಾಟಕಕಾರ, ಸಂಗೀತತಜ್ಞ-ಹೀಗೆ ವಿಧ-ವಿಧದಲ್ಲಿ ಅವರ ಕಾರ್ಯಶಕ್ತಿ ಅಭಿವ್ಯಕ್ತಿ ಪಡೆದಿದೆ. ಏಳು ದಶಕಗಳ ತಮ್ಮ ಸಾಹಿತ್ಯಿಕ ಜೀವನದಲ್ಲಿ ಹತ್ತು ಸಾವಿರ ಪುಟಗಳಷ್ಟು ಮುದ್ರಿತ ಸಾಹಿತ್ಯವನ್ನು ಅವರು ನಿರ್ಮಿಸಿದರು. ಕನ್ನಡ ಸಾಹಿತ್ಯ ಎಲ್ಲ ಪ್ರಕಾರಗಳಲ್ಲಿ ಸಮೃದ್ಧವಾಗಿರಬೇಕು ಎಂದು ಅವರು ಬರೆದರು. ಕನ್ನಡದಲ್ಲಿ ಬರೆದಷ್ಟು ವಿಸ್ತಾರವಾಗಿಯಲ್ಲದಿದ್ದರೂ ಅಷ್ಟೇ ಸಲೀಸಾಗಿ ಕೊಂಕಣಿ, ಮರಾಠಿ ಹಾಗೂ ಇಂಗ್ಲೀಷನಲ್ಲೂ ಬರೆದರು. **'ನಾಸ್ತಿ ಕಶ್ಚಿತ್ ಅವಿಷಯೋ ನಾಮ ಧೀಮತಾಂ'** ಎಂಬ ಕಾಳಿದಾಸನ ಉಕ್ತಿ ಅವರಿಗೆ ಪ್ರಿಯವಾದ ಸೂಕ್ತಿಯಾಗಿತ್ತು.

ತಮ್ಮ ಬಹುಶ್ರುತತ್ವ, ಸರ್ವಗ್ರಾಹಿಯಾದ ಬಹುಮುಖಿ ಆಸಕ್ತಿ, ಸಂಭಾಷಣಾ ಚಾತುರ್ಯ, ರುಚಿರಸಿಕತೆಯಿಂದಾಗಿ ನವೋದಯ ಕಾಲದ ಬಹುತೇಕ ಎಲ್ಲ ಹಿರಿಯ ಕನ್ನಡ ಸಾಹಿತಿಗಳಿಗೆ ಅವರು ಆಪ್ತರಾಗಿದ್ದರು. ತಾವು ಹಳೆಯ ತಲೆಮಾರಿನವರೆಂದು ಹೇಳಿಕೊಳ್ಳುತ್ತಿದ್ದರೂ ಹೊಸ ತಲೆಮಾರುಗಳ ಜೊತೆ ಆದರಾಭಿಮಾನದಿಂದ ಬೆರೆತು ಸಂವಾದಿಸಿದರು. ವಿಮರ್ಶಕರಾಗಿ ನವೋದಯ ಸಾಹಿತ್ಯವನ್ನು ವ್ಯಾಖ್ಯಾನಿಸಿದಷ್ಟೇ ಉತ್ಸಾಹದಿಂದ ನವ್ಯ, ಬಂಡಾಯ, ದಲಿತ ಸಾಹಿತ್ಯಗಳಿಗೂ ಪ್ರತಿಕ್ರಿಯಿಸಿದರು. ತಮ್ಮ ಕಾಲದ ಎಲ್ಲ ವಾಗ್ವಾದಗಳಲ್ಲೂ ವಿವೇಕಪೂರ್ಣ ಮಧ್ಯಪ್ರವೇಶಮಾಡಿ ವೈಚಾರಿಕ ಸಹಭಾಗಿತ್ವವನ್ನು ನೀಡಿದರು. ಹೊಸ ಪ್ರಶ್ನೆಗಳನ್ನು ವಿಭಿನ್ನ ನೆಲೆಗಳಿಂದ ಬಿತ್ತಿ ಸಂವಾದಗಳಿಗೆ ಹೊಸ ಆಯಾಮವನ್ನು ದೊರಕಿಸಿಕೊಟ್ಟರು.

ಬೌದ್ಧಿಕ ಪ್ರಖರತೆಯಷ್ಟೇ ಹೃದಯವಂತಿಕೆಯೂ ಇದ್ದ ಗೌರೀಶರಿಗೆ ತಮ್ಮ ಸುತ್ತಲಿನ ಜನಪದ ಜೀವನದ ಕುರಿತು ಆದರ ಮತ್ತು ಅಭಿಮಾನಗಳಿದ್ದವು. ತಾವು ಸ್ವತಃ ಒಪ್ಪದ ಜನಪದರ ಶ್ರದ್ಧೆ ಹಾಗೂ ನಂಬಿಕೆಗಳನ್ನು ಅವರು ಗೌರವಿಸಿದರು. 'ನಾಡು–ನುಡಿಯ ಸಂಘಟನೆಯ ತಂತ್ರವು ಜನತೆಯನ್ನು ಬಿಟ್ಟು ನಡೆಯಲಾಗದು; ಉದ್ಧಾರದ ಕಲ್ಪನೆಯ ಪರಾವಲಂಬಿತನವು ಇಲ್ಲಿ ಇರಬೇಕಾಗಿಲ್ಲ; ಉದಯದ ಕಲ್ಪನೆಯ ಸ್ವಾವಲಂಬನೆಯ ಸಾಧನೆಯೇ ನಮ್ಮ ನಾಡಿನ ಸಂಘಟನೆಯ ದಾರಿ ಆಗಬೇಕು'–ಎಂದು ಪ್ರತಿಪಾದಿಸಿದರು. ಯಾವ ಬದಲಾವಣೆಯೇ ಆದರೂ ವಿಕಾಸ ಕ್ರಮದಲ್ಲಿ ನವಿರಾಗಿ ನಿಧಾನವಾಗಿ ವಿಕಾಸಗೊಂಡು ಒಡಮೂಡಬೇಕೇ ವಿನಾ ಹೊರಗಿನ ಒತ್ತಡದಿಂದಲ್ಲ. ಅದೇ ರೀತಿ ಯಾವ ತಿಳುವಳಿಕೆಯೇ ಆದರೂ ಸಮುದಾಯವೊಂದು ತಾನೇ ತನ್ನ ಅಗತ್ಯಕ್ಕೆ ಬೇಕಾಗಿ ಮನನ ಮಾಡಿ ಮನಗಾಣಬೇಕು. ತಿಳುವಳಿಕೆ ಹಾಗೂ ಬದಲಾವಣೆ ಸಾಧ್ಯವಾಗುವ ಪರಿಸರವನ್ನು ಕಲ್ಪಿಸುವುದು ಹಾಗೂ ಸಾಮುದಾಯಿಕ ಜಾಗೃತಿಯನ್ನುಂಟು ಮಾಡಲು ಶ್ರಮಿಸುವುದು ಮಾತ್ರ ಬುದ್ಧಿಜೀವಿಯ ಕರ್ತವ್ಯ ಎಂಬುದು ಗೌರೀಶರ ನಿಲುವಾಗಿತ್ತು.

ಸಾಹಿತ್ಯ ವಿಮರ್ಶೆ ಗೌರೀಶರ ಪ್ರಧಾನ ಆಸಕ್ತಿಯೇನೂ ಆಗಿರಲಿಲ್ಲ. ತಾವು ಕೇವಲ ಬುದ್ಧಿವಾದಿ ವಸ್ತುನಿಷ್ಠ ವಿಚಾರ ಪದ್ಧತಿಯ ವರ್ಗಕ್ಕೆ ಸೇರಿದವರಾಗಿದ್ದು ವಿಚಾರ ಸಾಹಿತ್ಯದಲ್ಲಿಯಷ್ಟೇ ಕೃಷಿ ಮಾಡಿದವರೆಂದೂ ಜಿಜ್ಞಾಸೆ ಮತ್ತು ಲವಲವಿಕೆ ಮಾತ್ರವೇ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಕೊಳ್ಳಲು ತಮಗಿರುವ ಅರ್ಹತೆ ಎಂದೂ ಅವರೇ ಹೇಳಿಕೊಂಡಿದ್ದಾರೆ. ಆದರೆ ಜಿಜ್ಞಾಸೆ ಮತ್ತು ಲವಲಿಕೆಯೊಂದಿಗೆ ಅವರ ಬಹುಜ್ಞತೆ, ಬಹುಭಾಷಾ ಪಾಂಡಿತ್ಯ, ಸ್ವೋಪಜ್ಞ ಚಿಂತನೆ ಹಾಗೂ ಹೃದಯ ಸಂಪನ್ನತೆಗಳಿಂದಾಗಿ ಅವರೇ ಬಯಸಿದಂತೆ 'ಸಾಹಿತ್ಯಲೋಕದ ಸಹಯಾತ್ರಿಗಳ ಗಮನವನ್ನು ಇನ್ನಷ್ಟು ಆಳಕ್ಕೆ ಮತ್ತು ದೂರಕ್ಕೆ ಸೆಳೆಯಲು' ಅವರ ಕೆಲವು ವಿಮರ್ಶಾ ಬರಹಗಳಿಗಾದರೂ ಸಾಧ್ಯವಾಯಿತು.

ಗೌರೀಶರ ಪ್ರಕಾರ, ಸಾಹಿತ್ಯದಿಂದ ದೊರಕುವ ರಸಾನುಭವ ಜನತೆಯ ಮನಸ್ಸನ್ನು ಪಕ್ವಗೊಳಿಸುವಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಹೀಗಾಗಿ ಅವರು ಸಾಹಿತ್ಯವನ್ನು ಒಂದು ಪ್ರಮುಖ ಸಂಸ್ಕೃತಿ ನಿರ್ಮಾಪಕ ಶಕ್ತಿಯಾಗಿ ಕಂಡರು:

> 'ಜೀವವನ್ನು ಆತ್ಮವಾಗಿ, ವ್ಯಕ್ತಿಯನ್ನು ಆತ್ಮವಂತನಾಗಿ ಮಾಡಬಲ್ಲ
> ಸಂಸ್ಕಾರವನ್ನು – ಪ್ರಜ್ಞೆಯ ಆಳವನ್ನು, ಹೃದಯದ
> ವೈಶಾಲ್ಯವನ್ನು, ಸಂವೇದನೆಯ ಸೂಕ್ಷ್ಮತೆಯನ್ನು, ತಿಳಿವಿನ
> ತೀಕ್ಷ್ಣತೆಯನ್ನು – ಕೊಡಬಲ್ಲ ಪ್ರಭಾವಗಳಲ್ಲಿ ಈ

> ಕಾವ್ಯಾನಂದವು ಒಂದು – ಅಲ್ಲ, ಭಕ್ತಿಯೋಗದಂತೆಯೇ ಸುಲಭವಾದ ಸಾಧನೆ.
>
> (ಸಮಗ್ರ ಸಾಹಿತ್ಯ ಸಂ.೪, ೧೫)

ಆದರೆ ರಸಾವಿಷ್ಕಾರಕ್ಕೆ ಬೇಕಾದ ಸ-ಹೃದಯತೆ ಜನ್ಮಸಿದ್ಧವಾದದ್ದಲ್ಲ, ಯತ್ನಸಾಧ್ಯವಾದದ್ದು. ಅದು ಕೇವಲ ಕೃಷಿಯಿಂದಲೇ, ವ್ಯಾಸಂಗಬಲದಿಂದಲೇ ಅರ್ಜಿಸಿಕೊಳ್ಳಬಹುದಾದದ್ದು.

ಈ ಹಿನ್ನೆಲೆಯಲ್ಲಿಯೇ ಗೌರೀಶರು ವಿಮರ್ಶೆಯ ಕಾರ್ಯ ಹಾಗೂ ಮಹತ್ವವನ್ನು ಗುರುತಿಸಿಕೊಳ್ಳುತ್ತಾರೆ. ಅವರ ಪ್ರಕಾರ, ಇಂದಿನ ಯುಗಧರ್ಮವೇ ಸರಾಸರಿ ನಡುಮಟ್ಟದ್ದು (Mediocre). ಹಿಂದೆಲ್ಲ ಧರ್ಮಗಳೂ, ಭಕ್ತಿಮತ ಪಂಥಗಳೂ, ಹರಿಕಥೆ, ಯಕ್ಷಗಾನದಂತಹ ಕಲಾಪ್ರಕಾರಗಳೂ ಜನಾಭಿರುಚಿಯನ್ನೂ ಅದರ ಆರೋಚಿಕತೆಯನ್ನು ತಿದ್ದಿ ಶುಚಿಗೊಳಿಸುವ ಕಾರ್ಯವನ್ನು ಮಾಡುತ್ತಿದ್ದವು. ಆ ಹಳೆಯ ಪರಂಪರೆಯು ಕಡಿದುಹೋದ ಮೇಲೆ ಕಾವ್ಯವನ್ನು ಜನಪ್ರಿಯಗೊಳಿಸಲು ಯಾವ ಮಾಧ್ಯಮವೂ ಸರಿಯಾಗಿ ಸತತವಾಗಿ ಕೆಲಸಮಾಡಿಲ್ಲ. ಹೀಗಾಗಿ ಜನತೆಯ ಸಾಹಿತ್ಯಾಭಿರುಚಿಯ ಮಟ್ಟ ಇಳಿದಿದೆ. ಇದಕ್ಕೆ ಪ್ರತಿಯಾಗಿ ಕವಿಯ ಪ್ರಜ್ಞೆಯು ಎಂದಿಗಿಂತ ಹೆಚ್ಚು ತೀವ್ರ, ತೀಕ್ಷ್ಣ, ಸೂಕ್ಷ್ಮ ಮತ್ತು ಅಂತರ್ಮುಖಿಯಾಗುತ್ತ ಸಾಗಿದೆ. ಜೊತೆಗೆ, ಹೊಸಕಾವ್ಯವು ಹಳೆಯದರ ಸತ್ವ, ಸಂಸ್ಕಾರವನ್ನೆಲ್ಲ ಅರಗಿಸಿಕೊಂಡು ಅರಳುವುದರಿಂದ ಅದು ಹೆಚ್ಚು ಸಂಕೀರ್ಣ ಮತ್ತು ದುರೂಹ(ಕ್ಲಿಷ್ಟ)ವಾಗುವುದೂ ಸಹಜ. ಇಂತಹ 'ವಿಪರೀತ ಪ್ರಸಂಗ'ವನ್ನು ಲಕ್ಷ್ಯದಲ್ಲಿಟ್ಟುಕೊಂಡು ಗೌರೀಶರು ವಿಮರ್ಶೆಯ ಹೆಗಲಿಗೆ ಜನಶಿಕ್ಷಣದ ಹೊಣೆಗಾರಿಕೆಯನ್ನು ವರ್ಗಾಯಿಸುತ್ತಾರೆ. ಓದುಗನ ಅಭಿರುಚಿಯನ್ನು ತಿದ್ದುವುದು; ಸಾಹಿತ್ಯದಲ್ಲಿ ಉತ್ತಮವಾದುದೇನು? ಅದನ್ನು ಗುರುತಿಸುವುದು ಹೇಗೆ? ಎಂಬುದನ್ನು ಓದುಗನಿಗೆ ಬೋಧಿಸುವುದು ಮತ್ತು ಆ ಮೂಲಕ ಅವನನ್ನು ರಸಿಕನನ್ನಾಗಿ, ಸಹೃದಯಿಯನ್ನಾಗಿ ಮಾಡುವುದು; ಸಾಹಿತಿ ಮತ್ತು ಸಹೃದಯ ಇವರನ್ನು ಆದಷ್ಟು ಹತ್ತಿರ ತರುವುದು–ಇವು ಇಂದು, ನಮ್ಮ ಸಂದರ್ಭದಲ್ಲಿ ವಿಮರ್ಶೆಯ ಕರ್ತವ್ಯ ಎಂಬುದು ಗೌರೀಶರ ಪ್ರತಿಪಾದನೆ.

ಹೀಗೆ ರಸಾವಿಷ್ಕಾರಕ್ಕೆ ಸಾಮಾನ್ಯ ಜನರನ್ನು ಒಗ್ಗುವಂತೆ, ಒಲಿಯುವಂತೆ ಮಾಡುವುದು ಕಾವ್ಯದ ಉಳಿವಿಗೂ ಅಗತ್ಯವೆಂದು ಗೌರೀಶರು ವಾದಿಸುತ್ತಾರೆ. ಇಲ್ಲಿ ಅವರು ರಸಿಕನ ಮುಖಸ್ಪರ್ಶದಿಂದಲೇ ಹೊಸ ಸೃಷ್ಟಿ ಸಾಧ್ಯವೆಂಬ ಬೇಂದ್ರೆಯವರ ಕಾವ್ಯತತ್ತ್ವದೊಂದಿಗೆ ಸಹಮತ ಹೊಂದಿದ್ದಾರೆ. ಅವರ ಪ್ರಕಾರ

ಸಹೃದಯ ಮತ್ತು ಸಾಹಿತಿಯ ನಡುವೆ ಸಾಮರಸ್ಯ ಸ್ಥಾಪನೆಗೆ ದಾರಿತೋರಿಸುವವನೇ ಉತ್ತಮ ವಿಮರ್ಶಕ ಹಾಗೂ 'ರಸ ಪರಿಚಯ' ಹಾಗೂ 'ಕಾವ್ಯ ಸಮೀಕ್ಷೆ' ಸದ್ಯದ ನಮ್ಮ ಅಗತ್ಯ.

ಹೀಗಾಗಿ ಗೌರೀಶರ ವಿಮರ್ಶಾ ಬರಹಗಳು ಅವರ ಮೂಲ ಪ್ರವೃತ್ತಿಯಾದ ಜಿಜ್ಞಾಸೆ/ವಿಚಿಕಿತ್ಸೆ ಹಾಗೂ ವಿಮರ್ಶೆಯ ಮೇಲೆ ಅವರು ಆರೋಪಿಸಿಕೊಂಡ ರಸಸಮೀಕ್ಷೆಯ ಹೊಣೆಗಾರಿಕೆ–ಈ ಇಬ್ಬಗೆಯ ಸೆಳೆತಗಳ ಮೇಲಾಟದ ಕಣವಾಗಿದೆ. ವ್ಯಾಖ್ಯಾನದ ಉದ್ಗಾರಗಳು ಹಾಗೂ ವಿಮರ್ಶೆಯ ಪ್ರಶ್ನೆಗಳು, ತರ್ಕಶುದ್ಧ ವಿಚಿಕಿತ್ಸೆಯನ್ನು ಮೊಟಕುಮಾಡುವ ಗುಣಗ್ರಹಣದ ಉತ್ಸಾಹ ಹಾಗೂ ಉತ್ಸಾಹದ ಓಘಕ್ಕೆ ತಡೆಯೊಡ್ಡುವ ವಿಮರ್ಶೆಯ ತರ್ಕಸರಣಿ ಪರಸ್ಪರ ಸ್ಪರ್ಧಿಸಿ ಕುತೂಹಲಕಾರಿ ಒಡಂಬಡಿಕೆಗೆ ಬರುವ ವಿದ್ಯಮಾನಗಳನ್ನು 'ಕಂಪಿನ ಕರೆ'ಯಂತಹ ರೂಪಕಾತ್ಮಕ ಶೈಲಿಯನ್ನು ಗೌರೀಶರ ಎಲ್ಲ ಮುಖ್ಯ ವಿಮರ್ಶಾ ಬರಹಗಳಲ್ಲೂ ಕಾಣಬಹುದು.

ಕಂಪಿನ ಕರೆಯಲ್ಲಿ ಎರಡು ಲೇಖನಗಳಿವೆ: ಮೊದಲಿನದು – ೧೯೪೭ರಷ್ಟು ಹಿಂದೆ ಬರೆದದ್ದು – ಬೇಂದ್ರೆಯವರ ಕಾವ್ಯಗುರುತ್ವ, ವ್ಯಕ್ತಿತ್ವ, ವಿದ್ವತ್ತು ಹಾಗೂ ಕವಿತ್ವ ಈ ಚತುರ್ಮುಖಗಳನ್ನು ಪರಿಚಯಿಸುತ್ತದೆ. ಇದೊಂದು (ಅತ್ಯುತ್ಸಾಹದ) ಹುರುಪಿನ ಬರವಣಿಗೆ. ದೀರ್ಘವಾದ ಎರಡನೆಯ ಪ್ರಬಂಧ 'ಕಂಪಿನ ಕರೆ' ಇವೆಲ್ಲವುಗಳಿಗಿಂತ ಹೆಚ್ಚು ಧಾರಣಶಕ್ತಿಯುಳ್ಳದ್ದು. ಈ ಪ್ರಬಂಧದ ಉದ್ದೇಶ ಬೇಂದ್ರೆ ಕಾವ್ಯದ ಕುರಿತ ತಮಗಿದ್ದ ತಿಳುವಳಿಕೆಯನ್ನು ತಿಳಿಗೊಳಿಸಿಕೊಳ್ಳುವುದು ಹಾಗೂ ಆ ಕಾವ್ಯದಿಂದ ತಾನು ಪಡೆದುಕೊಂಡಿದ್ದನ್ನು ಸಮಾನಧರ್ಮಿಗಳೊಂದಿಗೆ ಹಂಚಿಕೊಳ್ಳುವುದು ಎಂದು ಗೌರೀಶರು ಹೇಳಿದ್ದರೂ ಈ ಬರಹದ ಅರ್ಧಕ್ಕಿಂತ ಹೆಚ್ಚುಭಾಗ ಬೇಂದ್ರೆ ಕಾವ್ಯದ ಕುರಿತ ಅಧ್ಯಾರೋಪಗಳನ್ನು ನಿವಾರಿಸಿಕೊಳ್ಳುವುದಕ್ಕೇ ಮೀಸಲಾಗಿರುವುದನ್ನು ನೋಡಿದರೆ ಗೌರೀಶರಿಗೆ ಬೇಂದ್ರೆ ವಿಮರ್ಶಾ ಪರಂಪರೆಯೊಂದಿಗೆ ಸಂವಾದಿಸುವ ಉದ್ದೇಶವೂ ಇತ್ತೆನಿಸುತ್ತದೆ. ಸಮೀಕ್ಷೆಯ ಉಳಿದರ್ಧ ಭಾಗದಲ್ಲಿ ಬೇಂದ್ರೆ ಕಾವ್ಯದ ರಸಪರಿಚಯವಿದೆ. ಇಡೀ ಬರಹದಲ್ಲಿ ಬೇಂದ್ರೆ ಕಾವ್ಯದ ವಸ್ತುವಿನ್ಯಾಸವನ್ನು ಅಷ್ಟಾಗಿ ಗಮನಿಸದೇ ತಂತ್ರವೈವಿಧ್ಯವನ್ನೇ ಮುನ್ನೆಲೆಗೆ ತಂದಿರುವುದು ಗಮನಾರ್ಹ. ಹೀಗಾಗಿ ಈ ಬರಹದಲ್ಲಿ ಮೇಲೆ ಹೇಳಿದ ಮೇಲಾಟವಲ್ಲದೆ ಎಂಭತ್ತರ ದಶಕದಲ್ಲಿ ಜಾರಿಯಲ್ಲಿದ್ದ ಕೃತಿ ನಿಷ್ಠತೆ ಹಾಗೂ ಕೃತಿಕಾರ ನಿಷ್ಠತೆಯ ಪ್ರಶ್ನೆಗಳೂ ಸೇರಿಕೊಂಡು ವಾದಮಂಡನೆಯ ಕಣಕ್ಕೆ ಕಳೆಬಂದಿದೆ.

ತಮಗೆ ದಿಗ್ದರ್ಶನವಿತ್ತ 'ಗುರುಪಂಚಕ'ದಲ್ಲಿ ದ.ರಾ.ಬೇಂದ್ರೆಯವರು ಒಬ್ಬರೆಂದು ಗೌರೀಶರು ಸ್ವೀಕರಿಸಿದ್ದರು. ಈ ಗುರುಪಂಚಕದಲ್ಲಿ ಶಂ.ಬಾ.ಜೋಶಿಯವರೂ ಸೇರಿದ್ದುದರಿಂದ ಬೇಂದ್ರೆ-ಶಂಬಾ ವಿರಸದ ಶಾಖ ಗೌರೀಶರಿಗೂ ತಟ್ಟಿತ್ತು. ಈ ಪ್ರಸಂಗವನ್ನು ಶಂ.ಬಾ. ಅವರೇ ದಾಖಲಿಸಿದ್ದರೂ ಗೌರೀಶರು ಮಾತ್ರ ಆ ಕುರಿತು ಮಾತನಾಡಲು ಇಷ್ಟಪಡಲಿಲ್ಲ. ಬದಲಾಗಿ ಆ ಧೀಮಂತ ಬರಹಗಾರ ವೈಯಕ್ತಿಕ ವಲಯದಾಚೆಯ ಪ್ರತಿಭಾ ವಿಶೇಷದ ಕುರಿತು ವಿಶೇಷ ಅಭಿಮಾನದಿಂದಲೇ ಬರೆದಿದ್ದಾರೆ.

ಬೇಂದ್ರೆ-ಗೌರೀಶರ ನಿಡುಗಾಲದ ಒಡನಾಟ ಹಾಗೂ ಬಾಂಧವ್ಯಕ್ಕೆ **'ಕಂಪಿನ ಕರೆ'** ಸಾಹಿತ್ಯ ಸ್ಮಾರಕವಾಗಿದೆ. ಹೀಗಾಗಿ ಗೌರೀಶರ ಜನ್ಮಶತಮಾನೋತ್ಸವದ ವರ್ಷದಲ್ಲಿ ಧಾರವಾಡದ 'ಬೇಂದ್ರೆ ಟ್ರಸ್ಟ್' ಈ ಕೃತಿಯನ್ನು ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣ. ಇದು ಸಾಧ್ಯವಾಗುತ್ತಿರುವುದು ಟ್ರಸ್ಟ್‌ನ ಅಧ್ಯಕ್ಷರಾದ ಡಾ. ಶ್ಯಾಮಸುಂದರ ಬಿದರಕುಂದಿಯವರ ಆಸಕ್ತಿಯಿಂದ. ಅವರಿಗೂ ಈ ಲೇಖನಗಳನ್ನು ಸಂಕಲಿಸಿ ಪ್ರಕಟಿಸಲು ಒಪ್ಪಿಗೆ ನೀಡಿದ ಗೆಳೆಯ ಜಯಂತ ಕಾಯ್ಕಿಣಿಯವರಿಗೂ ಗ್ರಂಥಸ್ವಾಮ್ಯದ ಶಾಂತಾ ಗೌರೀಶ ಕಾಯ್ಕಿಣಿಯವರಿಗೂ ಕೃತಜ್ಞತೆಗಳು.

ಕುಮಟಾ — -ಎಂ. ಜಿ. ಹೆಗಡೆ

೨೬-೧೦-೨೦೧೧



## ಗೌರೀಶ ಕಾಯ್ಕಿಣಿ

ಇವರು ೧೯೧೨ರಲ್ಲಿ ಗೋಕರ್ಣದಲ್ಲಿ ಹುಟ್ಟಿ, ಇಂಟರ್ ಮೀಡಿಯೆಟ್‌ವರೆಗೆ ವಿದ್ಯಾಭ್ಯಾಸ ಮಾಡಿ, ಬಂಕಿಕೊಡ್ಲ ಮತ್ತು ಗೋಕರ್ಣದ ಹೈಸ್ಕೂಲಗಳಲ್ಲಿ ನಲವತ್ತು ವರ್ಷ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಕನ್ನಡದಲ್ಲಿ ವಿಚಾರ ಸಾಹಿತ್ಯವನ್ನು ಆರಂಭಿಸಿದ ಲೇಖಕರಲ್ಲಿ ಇವರು ಪ್ರಮುಖರು. ಕವಿಹೃದಯದ ಇವರು ಕವಿತೆ, ಗೀತನಾಟಕ ರಚಿಸಿದ್ದಲ್ಲದೆ ವಿಪುಲವಾಗಿ ವಿಮರ್ಶೆ, ವಿವೇಚನೆ ಲೇಖನಗಳನ್ನೇ ಪ್ರಕಟಿಸಿದರು. ಉತ್ತರ ಕನ್ನಡ ಜಿಲ್ಲೆಯ, ಸಮುದ್ರತಡಿಯ ವ್ಯಾಸಂಗ ಜೀವಿಯಾಗಿ ಗೌರೀಶರು ತುಂಬ ಪ್ರಬುದ್ಧವಾದ, ವೈವಿಧ್ಯಮಯವಾದ ಕೃತಿಗಳನ್ನು ಕನ್ನಡಕ್ಕೆ ಕೊಟ್ಟರು. ಬಹುಭಾಷಾ ವಿಶಾರದರಾಗಿದ್ದ ಇವರು ಇಂಗ್ಲೀಷ್, ಹಿಂದಿ, ಮರಾಠಿ, ಕೊಂಕಣಿ ಮತ್ತು ಸಂಸ್ಕೃತಗಳಿಂದ ಅನುವಾದ ಮಾಡಿದ್ದಾರೆ. ಪತ್ರಿಕಾ ಅಂಕಣಕಾರರಾಗಿ, ಸಾಹಿತ್ಯ ಸಂಸ್ಕೃತಿಯ ಕ್ಷೇತ್ರವನ್ನು ಜಾಗೃತವಾಗಿ ಇರಿಸಿದ್ದರು. ಇವರ ವಿಮರ್ಶೆ ಬಹುಶ್ರುತವಾದದ್ದು. ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ ಗೌರೀಶರು ನಾಡಿನ ವಿಚಾರವಂತ ಸಮುದಾಯದಿಂದ ಗೌರವ ಮತ್ತು ಪ್ರಶಸ್ತಿಯನ್ನು ಪಡೆದಿದ್ದಾರೆ. ೨೦೦೨ರಂದು ನಿಧನರಾದರು.

## ಅರ್ಪಣೆ

'ಬೆನ್ ರಾಮಸನ್' ಗೋತ್ರದ
ನನ್ನ ಎಲ್ಲ ಗುರುಬಂಧುಗಳಿಗೆ
ಮತ್ತು
ಋಣಾನುಬಂಧಿಗಳಿಗೆ
ನನ್ನ ಈ ಋಷಿತರ್ಪಣವು
ತೃಪ್ತಿಯನ್ನು ತರಲಿ

ಗೌರೀಶ ಕಾಯ್ಕಿಣಿ

# ಪರಿವಿಡಿ

# ಕವೀಂದ್ರ ಬೇಂದ್ರೆ

ಸಾಧನಕೇರಿಯ ದಾರಿಯಲ್ಲಿ ಒಬ್ಬ ರಸಿಕ ನಡೆದಿದ್ದ. ಆತನ ಮುಂದೆಯೇ ತುಸು ದೂರ ಇಬ್ಬರು ಮಾತನಾಡುತ್ತ ನಡೆದಿದ್ದರು. ಅವರ ಮಾಸಿದ ಬಟ್ಟೆ, ಮೊಳಕೆಯೊಡೆದ ಗಡ್ಡಗಳಿಂದ ಹಳ್ಳಿಗರೆಂದು ತೋರುತ್ತಿತ್ತು. ದೊಡ್ಡ ದನಿಯಲ್ಲಿಯೇ ಹರಟುತ್ತಿರುವದರಿಂದ ಅವರು ಹಳ್ಳಿಗರೇ ಇರಬೇಕೆಂಬ ಭಾವ ದೃಢವಾಗುತಿತ್ತು. ಅವರ ಮಾತು ಹಿಂದೆ ನಡೆಯುತ್ತಿರುವ ರಸಿಕನ ಕಿವಿಗೆ ಬಿದ್ದು ಕುತೂಹಲವನ್ನು ಬಲವಾಗಿ ಕೆರಳಿಸಿತು. ಏಕೆಂದರೆ ಈ ಹಳ್ಳಿಯಕಗ್ಗರು ಕವಿ ಬೇಂದ್ರೆಯವರ ಕವನಗಳ ಕುರಿತು ಚರ್ಚಿಸುತ್ತಿದ್ದರು! ರಸಿಕನ ಕಣ್ಣು ಅರಳಿತು, ಮೈ ನಿಮಿರಿತು. 'ಕನ್ನಡಾಂಬೆಯೇ ನೀನು ಧನ್ಯೆ! ನಿನ್ನ ಹಳ್ಳಿಯ ಕಗ್ಗರು ಕೂಡ ವರಕವಿಗಳ ಹಾಡುಗಳನ್ನು ಇಷ್ಟು ಧಾರಾಳವಾಗಿ ಚರ್ಚಿಸುವರೆಂದ ಮೇಲೆ ಕನ್ನಡ ಜನ ಅದೆಷ್ಟು ಕುಲರಸಿಕರಿರಬೇಕು! ಶ್ರೀ ಬೇಂದ್ರೆಯವರ ಭಾಗ್ಯ ಅದೆಷ್ಟು ಹಿರಿದು!'– ಎಂದು ಗದ್ಗದಿತನಾಗಿ ಆ ರಸಿಕ ಗೃಹಸ್ಥನು ಮುಂದಾಗಿ ಅವರಿಬ್ಬರನ್ನು ಅಡ್ಡಗಟ್ಟಿ ಕಣ್ತುಂಬನೋಡಿ ಕಾಲಿಗೆರಗಲು ಹವಣಿಸಿದನು.

ಅವರಿಬ್ಬರೂ ಇದೇನು ಕಾಲ್ತೊಡಕು ಬಂತೆಂದು ದಿಗಿಲು ಬಿದ್ದರು. 'ಬೇಂದ್ರೆಯವರ ಕಾವ್ಯವನ್ನು ಇಷ್ಟೊಂದು ಭಕ್ತಿಯಿಂದ ಚರ್ಚಿಸುವ ನೀವುಗಳು ಧನ್ಯರಯ್ಯಾ!' ಅಂದ ನಮ್ಮ ರಸಿಕ. ಆಗ ಅವರಲ್ಲಿ ಒಬ್ಬ ಬಟ್ಟೆಯಲ್ಲಿ ಹೆಚ್ಚು ಹೊಲಸು, ಗಡ್ಡದಲ್ಲಿ ಹೆಚ್ಚು ಬೆಳಸು ಇದ್ದವರು–ತುಂಟತನದ ತುಟಿಮಿರದ ನಗೆಯಿಂದ ರಸಿಕನ ಸಾಷ್ಟಾಂಗ ನಮಸ್ಕಾರವನ್ನು ತಡೆದರು. 'ನಿಮ್ಮದೇನೋ ತಪ್ಪು ತಿಳುವಳಿಕೆ ಆಗಿದೆ. ನಾನೇ ಬೇಂದ್ರೆ, ಇವರು ನಮ್ಮ ಪ್ರಕಾಶಕ ಜಿ. ಬಿ. ಜೋಶಿಯವರು'–ಎಂದರು.

ಕತೆಯ ಸ್ವಾರಸ್ಯ ತಿಳಿಯಿತಲ್ಲವೆ. ಕೊನೆಗೂ ಬೇಂದ್ರೆಯವರ ಕಾವ್ಯ ತಿಳಿದು ಚರ್ಚಿಸುವವರು ಬೇಂದ್ರೆಯವರೂ ಅವರ ಪ್ರಕಾಶಕರೂ ಇಬ್ಬರೇ. ತಮ್ಮ ಪುಸ್ತಕಗಳು ಸಾಕಷ್ಟು ಮಾರಿಹೋಗುವದಿಲ್ಲವೇಕೆಂದು ಅವರಿಬ್ಬರು ಚರ್ಚಿಸುತ್ತಿದ್ದರು!

ಈ ಕತೆಯನ್ನು ಬೇಂದ್ರೆಯವರೇ ತಮ್ಮ ಅಪ್ರತಿಮ ಶೈಲಿಯಲ್ಲಿ ಹೇಳಬೇಕು. ಮೊದಲು ನಾನು ಇದನ್ನು ಕೇಳಿದ್ದು ಅವರ ಬಾಯಿಯಿಂದಲೇ. ತಮ್ಮ ಕಾವ್ಯದ ಕುರಿತೇ ಇಷ್ಟೊಂದು ವಿನೋದವಾಡುವ ಹದ ಬೇಂದ್ರೆಯವರಿಗೇ ಪಳಗಿದೆ. ಅವರ ಯಶಸ್ಸು ಯಾವ ಪರಿಹಾಸವನ್ನೂ ಮೀರಿ ಮೆರೆಯುವಷ್ಟು ಪ್ರತಿಷ್ಠಿತವಾಗಿ ಪ್ರಕಾಶಿಸುತ್ತದೆ. ಈ ಕತೆಯಲ್ಲಿ ವಿನೋದದೊಂದಿಗೆ ವಿನಯವೂ ಇದೆ. ಆದರೆ ಈ ವಿನಯ ವಿನೋದಗಳ ಹಿನ್ನೆಲೆಯಲ್ಲಿ ತಮ್ಮ ಅನನ್ಯ ಸಾಮಾನ್ಯ ಅನೇಕ ಸನ್ಮಾನ್ಯವಾದ ಅಪ್ರತಿಮ ಪ್ರತಿಭೆಯ ಕುರಿತು ಅಭಿಜಾತವಾದ ಅಭಿಮಾನವೂ ಇದೆ. ತಮ್ಮ ಸ್ಥಾನಮಾನಗಳ ಮಹತ್ವವನ್ನು ನಿಶ್ಚಯವಾಗಿ ಮನಗಂಡವರೇ ಹೀಗೆ ತಮ್ಮನ್ನೇ ತಾವು ಸಹಜವಾಗಿ ಮೂದಲಿಸಿಕೊಳ್ಳುವದುಂಟು. ಹಾಗಿದ್ದರೆ ಶ್ರೀಮಾನ್ ಬೇಂದ್ರೆಯವರು ವಶಪಡಿಸಿಕೊಂಡ ಅಷ್ಟೊಂದು ವಿಲೋಭನೀಯವಾದ ವಿಭೂಮತ್ವವಾದರೂ ಏನು?

ಶ್ರೀಮಾನ್ ಬೇಂದ್ರೆಯವರು ಕರ್ನಾಟಕದ ರವೀಂದ್ರರು, ಕನ್ನಡದ ಕವೀಂದ್ರರು. 'ಕವಿಃ ಕವಿನಾಂ' ಎಂಬ ಋಷಿವಾಕ್ಯ ಇಂದಿಗೆ ಕನ್ನಡ ಕಾವ್ಯದ ಮಟ್ಟಿಗೆ ಅಂಬಿಕಾತನಯದತ್ತರಿಗೆ ಒಪ್ಪುತ್ತದೆ. ಬೇಂದ್ರೆಯವರು ಕವಿಗಳ ಕವಿಗಳು. ಈ ಮಾತಿನ ಔಚಿತ್ಯವನ್ನು ವಿಚಾರಿಸೋಣ. ಕನ್ನಡದ ಇತರ ಕವಿಗಳ ಕೃತಿಗಳನ್ನು ಅರಿತುಕೊಳ್ಳಲಿಕ್ಕೆ ಬರೇ ರಸಿಕವೃತ್ತಿ ಮತ್ತು ಸಾಮಾನ್ಯ ಕನ್ನಡ ಪದಪ್ರಯೋಗಗಳ ಪರಿಜ್ಞಾನ ಸಾಕು. ಆದರೆ ಬೇಂದ್ರೆಯವರ ಕಾವ್ಯದ ಸವಿಸೊಗಸುಗಳು ಮನದಟ್ಟಾಗಬೇಕಾಗಿದ್ದರೆ ರಸಿಕತನದೊಂದಿಗೆ ಒಂದು ಕವಿಹೃದಯವು ಬೇಕು. ನಮ್ಮ ಭಾವನೆಯನ್ನಷ್ಟೇ ಅದು ಕೆರಳಿಸುವದಿಲ್ಲ; ನಮ್ಮ ಬುದ್ಧಿಗೂ ಅದು ಒರೆಗಲ್ಲಾಗಿ ನಿಲ್ಲುತ್ತದೆ! ಹಿಂದೆ ಹೇಳಿದ ಕತೆಯಲ್ಲಿ ಬೇಂದ್ರೆಯವರ ಕಾವ್ಯ ಕೊನೆಗೆ ಬೇಂದ್ರೆಯವರ ಮಟ್ಟಿಗೇ ಮೀಸಲಾಗಿ ಉಳಿದಿದೆಯೆಂಬ ಕೊಂಕುಮಾತು ಸೂಚಿತವಾಗಿದೆ. ಜನಸಾಮಾನ್ಯರಿಗೆ ಅಷ್ಟೇಕೆ? ಹೊಸಗನ್ನಡದ ಸವಿಗಾರಿಕೆಯನ್ನು ಕಲಿಸಿಕೊಟ್ಟು ಕನ್ನಡ ಕಾವ್ಯದ ಮುಖಪರಿಚಯುವನ್ನು ಮಾಡಿಸಿ ಕನ್ನಡ ಕುವರರ ಎದೆಮುಗುಳುಗಳನ್ನು ಸೊಗಸಿನ ಸಂಸ್ಕಾರದಿಂದ ಅರಳಿಸಲಿಕ್ಕೇ ದುಡಿಯುವ ಸಾವಿರಾರು ಕನ್ನಡ ಶಿಕ್ಷಕರಿಗೆ–ಬೇಂದ್ರೆಯವರ ಕೃತಿಗಳು ಕಬ್ಬಿನ ಗಣಿಯೋ,

ಕಬ್ಬಿಣದ ಕಡಲೆಯೋ ಆಗಿ ಕಾಣುವವೆಂಬ ಮಾತು ಅಲ್ಲಲ್ಲಿ ಕೇಳಬರುವದರ ಸ್ವಾರಸ್ಯವೂ ಇದೇ. ಬೇಂದ್ರೆಯವರ ಪ್ರತಿಭೆಯು ಮಿಡಿಯುವ ಕಾವ್ಯತಂತಿಯು ದಾಸಯ್ಯರ ಏಕತಾರಿಯದಲ್ಲ; ವೈಣಿಕ ಶಿಖಾಮಣಿಗಳ ರುದ್ರವೀಣೆಯದು. ಸಂಗೀತ ಬಲ್ಲವರೇ ಅದರ ಮರ್ಮವನ್ನು ತಿಳಿಯಬಲ್ಲರು. ಅಂತೆಯೇ ಅವರು ಕವಿಗಳ ಕವಿಗಳು.

ಇದಲ್ಲದೆ ನಿಜವಾಗಿಯೂ ಅವರು ಕವೀಂದ್ರರೆಂಬುದು ಇನ್ನೊಂದು ರೀತಿಯಾಗಿಯೂ ಸಿದ್ಧವಾಗಿದೆ. ಹೊಸಗನ್ನಡದ ಸಿರಿವಂತಿಕೆಗಾಗಿ ಅವರು ತಮ್ಮದೇ ಆದ ನಗನಾಣ್ಯಗಳ ಟಂಕಸಾಲೆಯನ್ನು ತೆರೆದಿದ್ದಾರೆ. ಕನ್ನಡ ಭುವನೇಶ್ವರಿಯನ್ನು ಮರುಳುಸಿದ್ಧನ ಮಾಯಾಕಿನ್ನರಿಯಂತೆ ಒಲಿಸಿ ನಲಿದಾಡಿಸಿಕೊಂಡು ಹೊಸ ಸಾಹಿತ್ಯ ಸಾಮ್ರಾಜ್ಯವನ್ನು ಕಟ್ಟಲಿಕ್ಕೆ ಅವರು ಸ್ವಯಂಪ್ರಭೆಯ ಸುವರ್ಣವೃಷ್ಟಿಯನ್ನು ಕರೆದಿರುವರಲ್ಲದೆ, "ತಮ್ಮಂತೆ ಆಗಿರಿ; ತಮ್ಮ ತೂಕದ ನಾಡು-ನುಡಿಗಳ ಹೊಸ ಬಳಕೆಯ ಹಾಡು-ಹೊನ್ನುಗಳ ಎರಕ ಹಾಕಿರಿ"-ಎಂದು "ರಸಿಕರಂಗ"ರಿಗೆಲ್ಲ ಕರೆಕರೆದು ಕಾವ್ಯಗುರುಗಳಾಗಿ ರಸದೀಕ್ಷೆಯನ್ನು ಕೊಟ್ಟಿದ್ದಾರೆ. ಬೇಂದ್ರೆಯವರು ಒಂದು ಸಂಸ್ಥೆಯಾಗಿದ್ದಾರೆ; ಒಂದು ಸಂಪ್ರದಾಯವಾಗಿದ್ದಾರೆ; ಒಂದು ಅಖಂಡ ಸ್ಫೂರ್ತಿಯ ಸೆಲೆಯಾಗಿದ್ದಾರೆ.

ಇನ್ನು ಒಬ್ಬ ವರಕವಿಯ ಪರಿಪಾಟಿಯನ್ನು ತಿದ್ದುತ್ತ ಅವನ ಸಾಂಪ್ರದಾಯದ ಸಾಧಕರಾಗಿ ಬರೆಯುವ ಹಲವು ಕವಿಭಾವಿಕರು ಇರುವದುಂಟು. ಆದರೆ ಅಂಥ ಸಾಂಪ್ರದಾಯಿಕತೆ ಬರೇ ನಿಃಸತ್ವ ಎರಕವಾಗಿಬಿಡುವದೂ ಉಂಟು. ತಮ್ಮ ಗುರುಗಳ ಬರಹಗಾರಿಕೆಯ ಹೊರಬೆಡಗು ಹುಸಿಬೆರಗನ್ನಷ್ಟೇ ಅರಗಿಸಿಕೊಂಡು ಅವರ ಕೃತಿಗಳ ಪ್ರತಿಬಿಂಬಗಳಾಗಿ ನೀರಸ ಪದ್ಯರಚನೆಯ ಹೊಳೆ ಹರಿಸುವವರು ಹಲವರಿರುತ್ತಾರೆ. ಇಂಥ ನರಕವಿಗಳಿಗೆ ಗುರುಗಳಾಗಿ ನಿಂತು ಬರೇ ತಮ್ಮ ಪ್ರತಿಧ್ವನಿಗಳನ್ನು ಮೊಳಗಿಸಿದ ಮಾತ್ರಕ್ಕೆ ಕವೀಂದ್ರತ್ವ ಯಾರಿಗೂ ಸಲ್ಲದು. ಸತ್ವಸಂಪನ್ನರಾಗಿ, ಸಮೃದ್ಧ ಕೃತಿಗಳನ್ನು ಕೊಡಬಲ್ಲ ಸಮರ್ಥ ಕವಿಗಳಾಗಿ ಬೆಳಗಬಲ್ಲ ಶಿಷ್ಯರನ್ನು ನಿರ್ಮಿಸುವವರೇ ನಿಜವಾಗಿ ಕವಿಕುಲ ಗುರುಗಳು. ಈ ಅರ್ಥದಲ್ಲಿಯೇ ಶ್ರೀಮಾನ್ ಬೇಂದ್ರೆಯವರು ಕವೀಂದ್ರರೆಂದು ಕರೆಯಿಸಿಕೊಳ್ಳಬಲ್ಲರು. ಗುರುಗಳ

ಪರಿಪಾಟಿಯಲ್ಲಿ ಒಟ್ಟಾರೆ ನಡೆದರೂ, ಗುರುಗಳ ಪ್ರೀತಿ, ಪ್ರೇರಣೆಗಳನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರ್ಯಾಯವಾಗಿ ಪಡೆಯುತ್ತಿದ್ದರೂ, ತಮ್ಮದೇ ಆದ ವೈವಿಧ್ಯ ವೈಶಿಷ್ಟ್ಯಗಳ ವೈಭವದಲ್ಲಿ, ಗುರುಗಳಿಗೆ ಸರಿಸಾಟಿಯಾಗುವಂತೆ ಒಡೆದೊಪ್ಪುವ ಪ್ರಿಯ ಶಿಷ್ಯರ ಕವಿಮಂಡಲವನ್ನು ಉಂಟುಮಾಡಿದ ಬೇಂದ್ರೆಯವರ ಪ್ರತಿಭೆ ನಿಜವಾಗಿಯೂ ಧನ್ಯ! ಬೇಂದ್ರೆ "ಮಾಸ್ತರ"ರ ಗರಡಿಯಲ್ಲಿ ಗಟ್ಟಿಗರಾಗಿ ಜಟ್ಟಿಗಳಾದ ಗೋಕಾಕ, ಮುಗಳಿ, ಗೀತಾಪ್ರಿಯ, ವಿನೀತ ರಾಮಚಂದ್ರರಾಯ, ಜಡಭರತ – ಮುಂತಾದವರು ಬರೇ ಗುರುವಿನ ಗೆರೆತಿದ್ದುವ ಅನುಯಾಯಿಗಳಲ್ಲ. ಸ್ವತಂತ್ರ ಸಾಮರ್ಥ್ಯದ ಕವಿಗಳಾಗಿ ಮೆರೆಯುತ್ತಿದ್ದಾರೆ. ಆದರೆ ಅವರ ಈ ಸ್ವಾತಂತ್ರ್ಯವೂ ಅರಳಿದ ಸತ್ವವೂ ಕಾವ್ಯಗುರುವಿನ ಅವ್ಯಕ್ತರಮಣೀಯವಾದ ಸ್ಫೂರ್ತಿಕಿರಣದಿಂದ ಉದ್ದೀಪಿತವಾಗಿದೆ. ಇಂಥ ಉದ್ದಾಮ ಕವಿಪರಂಪರೆಯ ದೀಪಮಾಲೆಯನ್ನು ಬೆಳಗಿಸಿದ ಅಮರಜ್ಯೋತಿಯಂತಿರುವ ಅಂಬಿಕಾತನಯದತ್ತರು ಕವೀಂದ್ರರೆನಿಸಿಕೊಳ್ಳುವದು ಸರ್ವಥೈವ ಸಾರ್ಥಕವು, ಸಮರ್ಥನೀಯವು!

ಹೀಗೆ ಬೇಂದ್ರೆಯವರ ಕಾವ್ಯಬ್ರಹ್ಮನ ಚತುರ್ಮುಖ ಸೌಂದರ್ಯದ ಒಂದು ಮುಖ–ಮಂದಿಗೆ ಕಾಣದೆ ಹಿಂಬದಿಗೆ ನಿಂತ ಮುಖ–ಕಾವ್ಯ ಗುರುತ್ವದ್ದೆಂದು ಸಿದ್ಧವಾಯಿತು. ಇನ್ನು ಲೋಕದಿದಿರು ಕಾಣಿಸಿಕೊಂಡು ಕಂಗೊಳಿಸುವ ಉಳಿದ ಮೂರು ಮುಖಗಳನ್ನು ನಿರೀಕ್ಷಿಸೋಣ. ಅವುಗಳಲ್ಲಿ ಒಂದು, ಅತ್ಯಂತ ಪ್ರಭಾವಿಯಾದ ಚಮತ್ಕಾರಿಕ ಪ್ರತಿಭೆಯ ಅಲೌಕಿಕ ಸೊಗಸುಗಾರಿಕೆಯ ವ್ಯಕ್ತಿತ್ವ.

"ವಿರಾಗಿಯಂದದಿ ಭ್ರಮಿಸುವ ಯಾವ ಭೃಂಗವನ್ನೂ ಇದರ ಕಂಪಿನ ಕರೆಯು ಸರಾಗವಾಗಿ" ಸೆಳೆಯುತ್ತದೆ. ಅವರಿದುರು ಕೂತು ಒಂದೆರಡು ನಿಮಿಷ ಮಾತನಾಡಿದರೆ–ಅಲ್ಲ ಬರೇ ಅವರ ಮಾತು ಕೇಳಿದರೆ (ಏಕೆಂದರೆ ಅವರು ಮಾತಾಡುವದೆ ಹೆಚ್ಚು!)–ಅವರ ಸ್ವತಂತ್ರ ಪ್ರತಿಭೆಯ ತೀಕ್ಷ್ಣತೆಯೂ ಪ್ರಸನ್ನವಿನೋದದ ಸೂಕ್ಷ್ಮತೆಯೂ ಯಾರಿಗೂ ಮನವರಿಕೆಯಾಗದೆ ಇರದು. ನಿಂದಿಸಲು ಬಂದ ಕುಹಕಿಯೂ ವಂದಿಸಲು ಕುತೂಹಲಿಯಾಗಿ ಕೂಡ್ರುವಂಥ ಪ್ರಭಾವ ಅವರ ವ್ಯಕ್ತಿತ್ವದಲ್ಲಿದೆ. ಯಾವದೇ ವಿಷಯವಿರಲಿ, ಬೇಂದ್ರೆಯವರ ವಿಚಾರ ಅದರಲ್ಲಿ ಅಷ್ಟೇ ದೂರಗಾಮಿ. ಬಾಳಿನ ವಿಶಾಲವಾದ ಅನುಭವ,

ಕಾವ್ಯಾನಂದವು ಒಂದು – ಅಲ್ಲ, ಭಕ್ತಿಯೋಗದಂತೆಯೇ ಸುಲಭವಾದ ಸಾಧನೆ.

(ಸಮಗ್ರ ಸಾಹಿತ್ಯ ಸಂ.೪, ೧೫)

ಆದರೆ ರಸಾವಿಷ್ಕಾರಕ್ಕೆ ಬೇಕಾದ ಸ-ಹೃದಯತೆ ಜನ್ಮಸಿದ್ಧವಾದದ್ದಲ್ಲ, ಯತ್ನಸಾಧ್ಯವಾದದ್ದು. ಅದು ಕೇವಲ ಕೃಷಿಯಿಂದಲೇ, ವ್ಯಾಸಂಗಬಲದಿಂದಲೇ ಅರ್ಜಿಸಿಕೊಳ್ಳಬಹುದಾದದ್ದು.

ಈ ಹಿನ್ನೆಲೆಯಲ್ಲಿಯೇ ಗೌರೀಶರು ವಿಮರ್ಶೆಯ ಕಾರ್ಯ ಹಾಗೂ ಮಹತ್ವವನ್ನು ಗುರುತಿಸಿಕೊಳ್ಳುತ್ತಾರೆ. ಅವರ ಪ್ರಕಾರ, ಇಂದಿನ ಯುಗಧರ್ಮವೇ ಸರಾಸರಿ ನಡುಮಟ್ಟದ್ದು (Mediocre). ಹಿಂದೆಲ್ಲ ಧರ್ಮಗಳೂ, ಭಕ್ತಿಮತ ಪಂಥಗಳೂ, ಹರಿಕಥೆ, ಯಕ್ಷಗಾನದಂತಹ ಕಲಾಪ್ರಕಾರಗಳೂ ಜನಾಭಿರುಚಿಯನ್ನೂ ಅದರ ಆರೋಚಿಕತೆಯನ್ನು ತಿದ್ದಿ ಶುಚಿಗೊಳಿಸುವ ಕಾರ್ಯವನ್ನು ಮಾಡುತ್ತಿದ್ದವು. ಆ ಹಳೆಯ ಪರಂಪರೆಯು ಕಡಿದುಹೋದ ಮೇಲೆ ಕಾವ್ಯವನ್ನು ಜನಪ್ರಿಯಗೊಳಿಸಲು ಯಾವ ಮಾಧ್ಯಮವೂ ಸರಿಯಾಗಿ ಸತತವಾಗಿ ಕೆಲಸಮಾಡಿಲ್ಲ. ಹೀಗಾಗಿ ಜನತೆಯ ಸಾಹಿತ್ಯಾಭಿರುಚಿಯ ಮಟ್ಟ ಇಳಿದಿದೆ. ಇದಕ್ಕೆ ಪ್ರತಿಯಾಗಿ ಕವಿಯ ಪ್ರಜ್ಞೆಯು ಎಂದಿಗಿಂತ ಹೆಚ್ಚು ತೀವ್ರ, ತೀಕ್ಷ್ಣ, ಸೂಕ್ಷ್ಮ ಮತ್ತು ಅಂತರ್ಮುಖಿಯಾಗುತ್ತ ಸಾಗಿದೆ. ಜೊತೆಗೆ, ಹೊಸಕಾವ್ಯವು ಹಳೆಯದರ ಸತ್ವ, ಸಂಸ್ಕಾರವನ್ನೆಲ್ಲ ಅರಗಿಸಿಕೊಂಡು ಅರಳುವುದರಿಂದ ಅದು ಹೆಚ್ಚು ಸಂಕೀರ್ಣ ಮತ್ತು ದುರೂಹ(ಕ್ಲಿಷ್ಟ)ವಾಗುವುದೂ ಸಹಜ. ಇಂತಹ 'ವಿಪರೀತ ಪ್ರಸಂಗ'ವನ್ನು ಲಕ್ಷ್ಯದಲ್ಲಿಟ್ಟುಕೊಂಡು ಗೌರೀಶರು ವಿಮರ್ಶೆಯ ಹೆಗಲಿಗೆ ಜನಶಿಕ್ಷಣದ ಹೊಣೆಗಾರಿಕೆಯನ್ನು ವರ್ಗಾಯಿಸುತ್ತಾರೆ. ಓದುಗನ ಅಭಿರುಚಿಯನ್ನು ತಿದ್ದುವುದು; ಸಾಹಿತ್ಯದಲ್ಲಿ ಉತ್ತಮವಾದುದೇನು? ಅದನ್ನು ಗುರುತಿಸುವುದು ಹೇಗೆ? ಎಂಬುದನ್ನು ಓದುಗನಿಗೆ ಬೋಧಿಸುವುದು ಮತ್ತು ಆ ಮೂಲಕ ಅವನನ್ನು ರಸಿಕನನ್ನಾಗಿ, ಸಹೃದಯಿಯನ್ನಾಗಿ ಮಾಡುವುದು; ಸಾಹಿತಿ ಮತ್ತು ಸಹೃದಯ ಇವರನ್ನು ಆದಷ್ಟು ಹತ್ತಿರ ತರುವುದು–ಇವು ಇಂದು, ನಮ್ಮ ಸಂದರ್ಭದಲ್ಲಿ ವಿಮರ್ಶೆಯ ಕರ್ತವ್ಯ ಎಂಬುದು ಗೌರೀಶರ ಪ್ರತಿಪಾದನೆ.

ಹೀಗೆ ರಸಾವಿಷ್ಕಾರಕ್ಕೆ ಸಾಮಾನ್ಯ ಜನರನ್ನು ಒಗ್ಗುವಂತೆ, ಒಲಿಯುವಂತೆ ಮಾಡುವುದು ಕಾವ್ಯದ ಉಳಿವಿಗೂ ಅಗತ್ಯವೆಂದು ಗೌರೀಶರು ವಾದಿಸುತ್ತಾರೆ. ಇಲ್ಲಿ ಅವರು ರಸಿಕನ ಮುಖಸ್ಪರ್ಶದಿಂದಲೇ ಹೊಸ ಸೃಷ್ಟಿ ಸಾಧ್ಯವೆಂಬ ಬೇಂದ್ರೆಯವರ ಕಾವ್ಯತತ್ತ್ವದೊಂದಿಗೆ ಸಹಮತ ಹೊಂದಿದ್ದಾರೆ. ಅವರ ಪ್ರಕಾರ

ಸಹೃದಯ ಮತ್ತು ಸಾಹಿತಿಯ ನಡುವೆ ಸಾಮರಸ್ಯ ಸ್ಥಾಪನೆಗೆ ದಾರಿತೋರಿಸುವವನೇ ಉತ್ತಮ ವಿಮರ್ಶಕ ಹಾಗೂ 'ರಸ ಪರಿಚಯ' ಹಾಗೂ 'ಕಾವ್ಯ ಸಮೀಕ್ಷೆ' ಸದ್ಯದ ನಮ್ಮ ಅಗತ್ಯ.

ಹೀಗಾಗಿ ಗೌರೀಶರ ವಿಮರ್ಶಾ ಬರಹಗಳು ಅವರ ಮೂಲ ಪ್ರವೃತ್ತಿಯಾದ ಜಿಜ್ಞಾಸೆ/ವಿಚಿಕಿತ್ಸೆ ಹಾಗೂ ವಿಮರ್ಶೆಯ ಮೇಲೆ ಅವರು ಆರೋಪಿಸಿಕೊಂಡ ರಸಸಮೀಕ್ಷೆಯ ಹೊಣೆಗಾರಿಕೆ–ಈ ಇಬ್ಬಗೆಯ ಸೆಳೆತಗಳ ಮೇಲಾಟದ ಕಣವಾಗಿದೆ. ವ್ಯಾಖ್ಯಾನದ ಉದ್ಗಾರಗಳು ಹಾಗೂ ವಿಮರ್ಶೆಯ ಪ್ರಶ್ನೆಗಳು, ತರ್ಕಶುದ್ಧ ವಿಚಿಕಿತ್ಸೆಯನ್ನು ಮೊಟಕುಮಾಡುವ ಗುಣಗ್ರಹಣದ ಉತ್ಸಾಹ ಹಾಗೂ ಉತ್ಸಾಹದ ಓಘಕ್ಕೆ ತಡೆಯೊಡ್ಡುವ ವಿಮರ್ಶೆಯ ತರ್ಕಸರಣಿ ಪರಸ್ಪರ ಸ್ಪರ್ಧಿಸಿ ಕುತೂಹಲಕಾರಿ ಒಡಂಬಡಿಕೆಗೆ ಬರುವ ವಿದ್ಯಮಾನಗಳನ್ನು 'ಕಂಪಿನಕರೆ'ಯಂತಹ ರೂಪಕಾತ್ಮಕ ಶೈಲಿಯನ್ನು ಗೌರೀಶರ ಎಲ್ಲ ಮುಖ್ಯ ವಿಮರ್ಶಾ ಬರಹಗಳಲ್ಲೂ ಕಾಣಬಹುದು.

ಕಂಪಿನ ಕರೆಯಲ್ಲಿ ಎರಡು ಲೇಖನಗಳಿವೆ: ಮೊದಲಿನದು – ೧೯೪೪ರಷ್ಟು ಹಿಂದೆ ಬರೆದದ್ದು – ಬೇಂದ್ರೆಯವರ ಕಾವ್ಯಗುರುತ್ವ, ವ್ಯಕ್ತಿತ್ವ, ವಿದ್ವತ್ತು ಹಾಗೂ ಕವಿತ್ವ ಈ ಚತುರ್ಮುಖಗಳನ್ನು ಪರಿಚಯಿಸುತ್ತದೆ. ಇದೊಂದು (ಅತ್ಯುತ್ಸಾಹದ) ಹುರುಪಿನ ಬರವಣಿಗೆ. ದೀರ್ಘವಾದ ಎರಡನೆಯ ಪ್ರಬಂಧ 'ಕಂಪಿನ ಕರೆ' ಇವೆಲ್ಲವುಗಳಿಗಿಂತ ಹೆಚ್ಚು ಧಾರಣಶಕ್ತಿಯುಳ್ಳದ್ದು. ಈ ಪ್ರಬಂಧದ ಉದ್ದೇಶ ಬೇಂದ್ರೆ ಕಾವ್ಯದ ಕುರಿತ ತಮಗಿದ್ದ ತಿಳುವಳಿಕೆಯನ್ನು ತಿಳಿಗೊಳಿಸಿಕೊಳ್ಳುವುದು ಹಾಗೂ ಆ ಕಾವ್ಯದಿಂದ ತಾನು ಪಡೆದುಕೊಂಡಿದ್ದನ್ನು ಸಮಾನಧರ್ಮಿಗಳೊಂದಿಗೆ ಹಂಚಿಕೊಳ್ಳುವುದು ಎಂದು ಗೌರೀಶರು ಹೇಳಿದ್ದರೂ ಈ ಬರಹದ ಅರ್ಧಕ್ಕಿಂತ ಹೆಚ್ಚುಭಾಗ ಬೇಂದ್ರೆ ಕಾವ್ಯದ ಕುರಿತ ಅಧ್ಯಾರೋಪಗಳನ್ನು ನಿವಾರಿಸಿಕೊಳ್ಳುವುದಕ್ಕೇ ಮೀಸಲಾಗಿರುವುದನ್ನು ನೋಡಿದರೆ ಗೌರೀಶರಿಗೆ ಬೇಂದ್ರೆ ವಿಮರ್ಶಾ ಪರಂಪರೆಯೊಂದಿಗೆ ಸಂವಾದಿಸುವ ಉದ್ದೇಶವೂ ಇತ್ತೆನಿಸುತ್ತದೆ. ಸಮೀಕ್ಷೆಯ ಉಳಿದರ್ಧ ಭಾಗದಲ್ಲಿ ಬೇಂದ್ರೆ ಕಾವ್ಯದ ರಸಪರಿಚಯವಿದೆ. ಇಡೀ ಬರಹದಲ್ಲಿ ಬೇಂದ್ರೆ ಕಾವ್ಯದ ವಸ್ತುವಿನ್ಯಾಸವನ್ನು ಅಷ್ಟಾಗಿ ಗಮನಿಸದೇ ತಂತ್ರವೈವಿಧ್ಯವನ್ನೇ ಮುನ್ನೆಲೆಗೆ ತಂದಿರುವುದು ಗಮನಾರ್ಹ. ಹೀಗಾಗಿ ಈ ಬರಹದಲ್ಲಿ ಮೇಲೆ ಹೇಳಿದ ಮೇಲಾಟವಲ್ಲದೆ ಎಂಭತ್ತರ ದಶಕದಲ್ಲಿ ಜಾರಿಯಲ್ಲಿದ್ದ ಕೃತಿ ನಿಷ್ಠತೆ ಹಾಗೂ ಕೃತಿಕಾರ ನಿಷ್ಠತೆಯ ಪ್ರಶ್ನೆಗಳೂ ಸೇರಿಕೊಂಡು ವಾದಮಂಡನೆಯ ಕಣಕ್ಕೆ ಕಳೆಬಂದಿದೆ.

ತಮಗೆ ದಿಗ್ದರ್ಶನವಿತ್ತ 'ಗುರುಪಂಚಕ'ದಲ್ಲಿ ದ.ರಾ.ಬೇಂದ್ರೆಯವರು ಒಬ್ಬರೆಂದು ಗೌರೀಶರು ಸ್ವೀಕರಿಸಿದ್ದರು. ಈ ಗುರುಪಂಚಕದಲ್ಲಿ ಶಂ.ಬಾ.ಜೋಶಿಯವರೂ ಸೇರಿದ್ದುದರಿಂದ ಬೇಂದ್ರೆ-ಶಂಬಾ ವಿರಸದ ಶಾಖ ಗೌರೀಶರಿಗೂ ತಟ್ಟಿತ್ತು. ಈ ಪ್ರಸಂಗವನ್ನು ಶಂ.ಬಾ. ಅವರೇ ದಾಖಲಿಸಿದ್ದರೂ ಗೌರೀಶರು ಮಾತ್ರ ಆ ಕುರಿತು ಮಾತನಾಡಲು ಇಷ್ಟಪಡಲಿಲ್ಲ. ಬದಲಾಗಿ ಆ ಧೀಮಂತ ಬರಹಗಾರ ವೈಯಕ್ತಿಕ ವಲಯದಾಚೆಯ ಪ್ರತಿಭಾ ವಿಶೇಷದ ಕುರಿತು ವಿಶೇಷ ಅಭಿಮಾನದಿಂದಲೇ ಬರೆದಿದ್ದಾರೆ.

ಬೇಂದ್ರೆ-ಗೌರೀಶರ ನಿಡುಗಾಲದ ಒಡನಾಟ ಹಾಗೂ ಬಾಂಧವ್ಯಕ್ಕೆ **'ಕಂಪಿನ ಕರೆ'** ಸಾಹಿತ್ಯ ಸ್ಮಾರಕವಾಗಿದೆ. ಹೀಗಾಗಿ ಗೌರೀಶರ ಜನ್ಮಶತಮಾನೋತ್ಸವದ ವರ್ಷದಲ್ಲಿ ಧಾರವಾಡದ 'ಬೇಂದ್ರೆ ಟ್ರಸ್ಟ್' ಈ ಕೃತಿಯನ್ನು ಪ್ರಕಟಿಸುತ್ತಿರುವುದು ಔಚಿತ್ಯಪೂರ್ಣ. ಇದು ಸಾಧ್ಯವಾಗುತ್ತಿರುವುದು ಟ್ರಸ್ಟ್‌ನ ಅಧ್ಯಕ್ಷರಾದ ಡಾ. ಶ್ಯಾಮಸುಂದರ ಬಿದರಕುಂದಿಯವರ ಆಸಕ್ತಿಯಿಂದ. ಅವರಿಗೂ ಈ ಲೇಖನಗಳನ್ನು ಸಂಕಲಿಸಿ ಪ್ರಕಟಿಸಲು ಒಪ್ಪಿಗೆ ನೀಡಿದ ಗೆಳೆಯ ಜಯಂತ ಕಾಯ್ಕಿಣಿಯವರಿಗೂ ಗ್ರಂಥಸ್ವಾಮ್ಯದ ಶಾಂತಾ ಗೌರೀಶ ಕಾಯ್ಕಿಣಿಯವರಿಗೂ ಕೃತಜ್ಞತೆಗಳು.

ಕುಮಟಾ —ಎಂ. ಜಿ. ಹೆಗಡೆ
೨೬-೧೦-೨೦೧೧



## ಗೌರೀಶ ಕಾಯ್ಕಿಣಿ

ಇವರು ೧೯೧೨ರಲ್ಲಿ ಗೋಕರ್ಣದಲ್ಲಿ ಹುಟ್ಟಿ, ಇಂಟರ್ ಮೀಡಿಯೆಟ್‌ವರೆಗೆ ವಿದ್ಯಾಭ್ಯಾಸ ಮಾಡಿ, ಬಂಕಿಕೊಡ್ಲ ಮತ್ತು ಗೋಕರ್ಣದ ಹೈಸ್ಕೂಲಗಳಲ್ಲಿ ನಲವತ್ತು ವರ್ಷ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಕನ್ನಡದಲ್ಲಿ ವಿಚಾರ ಸಾಹಿತ್ಯವನ್ನು ಆರಂಭಿಸಿದ ಲೇಖಕರಲ್ಲಿ ಇವರು ಪ್ರಮುಖರು. ಕವಿಹೃದಯದ ಇವರು ಕವಿತೆ, ಗೀತನಾಟಕ ರಚಿಸಿದ್ದಲ್ಲದೆ ವಿಪುಲವಾಗಿ ವಿಮರ್ಶೆ, ವಿವೇಚನೆ ಲೇಖನಗಳನ್ನೇ ಪ್ರಕಟಿಸಿದರು. ಉತ್ತರ ಕನ್ನಡ ಜಿಲ್ಲೆಯ, ಸಮುದ್ರತಡಿಯ ವ್ಯಾಸಂಗ ಜೀವಿಯಾಗಿ ಗೌರೀಶರು ತುಂಬ ಪ್ರಬುದ್ಧವಾದ, ವೈವಿಧ್ಯಮಯವಾದ ಕೃತಿಗಳನ್ನು ಕನ್ನಡಕ್ಕೆ ಕೊಟ್ಟರು. ಬಹುಭಾಷಾ ವಿಶಾರದರಾಗಿದ್ದ ಇವರು ಇಂಗ್ಲೀಷ್, ಹಿಂದಿ, ಮರಾಠಿ, ಕೊಂಕಣಿ ಮತ್ತು ಸಂಸ್ಕೃತಗಳಿಂದ ಅನುವಾದ ಮಾಡಿದ್ದಾರೆ. ಪತ್ರಿಕಾ ಅಂಕಣಕಾರರಾಗಿ, ಸಾಹಿತ್ಯ ಸಂಸ್ಕೃತಿಯ ಕ್ಷೇತ್ರವನ್ನು ಜಾಗೃತವಾಗಿ ಇರಿಸಿದ್ದರು. ಇವರ ವಿಮರ್ಶೆ ಬಹುಶ್ರುತವಾದದ್ದು. ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ ಗೌರೀಶರು ನಾಡಿನ ವಿಚಾರವಂತ ಸಮುದಾಯದಿಂದ ಗೌರವ ಮತ್ತು ಪ್ರಶಸ್ತಿಯನ್ನು ಪಡೆದಿದ್ದಾರೆ. ೨೦೦೨ರಂದು ನಿಧನರಾದರು.

ಆತ್ಮಾನುಸಂಧಾನದ ಆಳವಾದ ಅನುಭಾವ ಇವೆರಡರಿಂದ ಅವರ ವ್ಯಕ್ತಿತ್ವ ಪಾಕಗೊಂಡಿದೆ. ಅವರೊಂದಿಗೆ ಪ್ರತಿವಾದಿಸುವವರನ್ನೂ ಸೋಲಿಸಿ ಒಲಿಸಿಕೊಳ್ಳುವ ಮಾತಿನ ಹದ – ಬೇಂದ್ರೆಯವರದಾಗಿದೆ. ಅವರೊಂದಿಗೆ ಮಾತು ಬಂದಾಗ ಸೋತುಹೋಗುವದೂ ಒಂದು ಜಾಣತನದ ಬಗೆಯೇ. ಇದು ಅವರ ವ್ಯಕ್ತಿತ್ವದ ವಿಜಯ. ಅವರ ಮಾತುಗಳಿಗೆ ನಾವು ಒಪ್ಪಲಿ ಬಿಡಲಿ, ಅವರ ಮಾತುಗಳಿಗೆ ನಾವು ಮಾರಿಹೋಗುತ್ತೇವೆ. ಉತ್ತಮ ಚಿತ್ರಗಳನ್ನೂ ಕೂಡ ನೋಡಲು ಒಂದು ಅಂತರವಿರುತ್ತದೆ. ಇಂತಿಷ್ಟು ಅಡಿ ದೂರದಿಂದ ಆ ಚಿತ್ರ ನೋಡಬೇಕೆಂಬ ಸಂಕೇತವಿರುತ್ತದೆ. ಆದರೆ ಬೇಂದ್ರೆಯವರು ಹೀಗೆ ದೂರಿಂದ ನುಣ್ಣಗೆ ಕಾಣುವ ಬೆಟ್ಟವಲ್ಲ. ಹತ್ತಿರಿರಲಿ, ದೂರವಿರಲಿ, ಅವರ ವ್ಯಕ್ತಿತ್ವದ ರಂಗಸಾಲೆ ಅಷ್ಟೇ ಸಿಂಗಾರಾಗಿ ಒಪ್ಪುತ್ತದೆ.

ಅವರ ಪ್ರತಿಭೆಯ ಇನ್ನೊಂದು ಮುಖ ಐಶ್ವರ್ಯ ಸಂಪನ್ನವಾದ ಅವರ ಕವಿತ್ವ ಈ ಮುಖ ಅವರ ಸಿರಿ ಮುಖ. ಚತುರ್ಮುಖಗಳಲ್ಲಿಯೂ ನಡುವೆ ಕಂಗೊಳಿಸುವ ಮಂಗಲಸನ್ಮುಖವಾಗಿರುವ ಸಮುಜ್ವಲ ಹಸನ್ಮುಖ. ಬೇಂದ್ರೆಯವರ ಜೀವನದ ಸಮುದ್ರಮಂಥನದಿಂದ ಮೇಲಿದ್ದ ಲಕ್ಷ್ಮಿಯೇ ಅವರ ಕಾವ್ಯ. ಇದರಲ್ಲಿ ಚಂದ್ರನ ಶಾಂತಿಯಿದೆ, ಕೌಸ್ತುಭದ ಕಾಂತಿಯೂ ಇದೆ. ಕನ್ನಡದ ಅಭಿಜಾತ ವರಕವಿಗಳು ಇಬ್ಬರು: ಒಬ್ಬರು ಕೆ.ವ್ಹಿ.ಪುಟ್ಟಪ್ಪನವರು, ಇನ್ನೊಬ್ಬರು ಬೇಂದ್ರೆಯವರು. ಸಿರಿಗನ್ನಡದ ಮಹೋನ್ನತಿಗೆ ಇವೆರಡು ಸರಿಸಮಾನವಾದ ಶಿಖರಗಳು. ಇವರಲ್ಲಿ ಕ್ರಮ ಕಾಣುವದು ಒಂದು ಎಣಿಕೆಯ ಅನುಕೂಲ. ಆದರೂ ಇಬ್ಬರಿಗೂ ತಮ್ಮದೇ ಆದ ಅನನ್ಯ ಪರತಂತ್ರವಾದ ಶ್ರೇಯ ಶೈಲಿಗಳ ವೈಶಿಷ್ಟ್ಯವಿದೆ. ಸ್ವಲ್ಪದರಲ್ಲಿ ಹೇಳುವದಾದರೆ ಪುಟ್ಟಪ್ಪನವರದು ಚಿತ್ರಿತ ಪ್ರತಿಭೆ. ಬೇಂದ್ರೆಯವರದು ಸೂಚಕ ಪ್ರತಿಭೆ. ಅವರು ಸಾವಿರ ಶಬ್ದ ಸಂಭಾರಗಳಿಂದ ಒಂದು ಸನ್ನಿವೇಶ ಒಡೆದೆದ್ದು ಕಾಣುವಂತೆ ವರ್ಣಿಸಬಲ್ಲರು. ಅದೇ ಸನ್ನಿವೇಶದ ಮೂಲಸೂತ್ರವನ್ನು ಮುಖ್ಯರೇಖೆಗಳನ್ನು ಮಾತ್ರ ನಿಡಿದಾಗಿ ಬರೆದು ಮಿಕ್ಕ ವಿವರಗಳನ್ನೆಲ್ಲ ಓದುಗರ ಊಹೆಗೆ ಬಿಟ್ಟು ಬೇಂದ್ರೆಯವರು ಮಿತವಾದ ಮಾತುಗಳಲ್ಲಿ ಮೂಡಿಸಬಲ್ಲರು. ಪುಟ್ಟಪ್ಪನವರ ಕಲೆ ವಾಸ್ತುಶಿಲ್ಪ. ಬೇಂದ್ರೆಯವರ ಕಲೆ ಮೂರ್ತಿಶಿಲ್ಪ. ಸಂಸ್ಕೃತ

ಪ್ರಚುರ ಸಂಕೀರ್ಣಪದ ಪದ್ಯಗಳ ಪ್ರಚಂಡಸ್ತೂಪವನ್ನು ಕಟ್ಟಿ ಶಬ್ದ ಸೌಂದರ್ಯದ ಭವ್ಯತೆಯನ್ನು ಪುಟ್ಟಪ್ಪನವರು ನಿರ್ಮಿಸಬಲ್ಲರು. ಬೇಂದ್ರೆಯವರ ಮಾರ್ಗ ಬೇರೆ. ಅಮೃತಶಿಲೆಯಲ್ಲಿಯೇ ಒರಗಿರುವ ಚೆಲುವನ್ನು ಕೆತ್ತಿ ಕೊರೆದು ಪುಟಗೊಳಿಸಿ ಪ್ರಕಟಮಾಡಿ ಕಿರಿದರೊಳಗೆ ಹಿರಿದನ್ನು ಎರಕಹೊಯ್ದು ರಸಸೌಂದರ್ಯದ ದಿವ್ಯತೆಯನ್ನು ಅರಳಿಸಬಲ್ಲರು. ಆದ್ದರಿಂದಲೇ ಏನೋ ಪುಟ್ಟಪ್ಪನವರ ಕಾವ್ಯ ಓದುವವರಿಗೆ ಕೆಲವೊಮ್ಮೆ ಶಬ್ದಪರಿಜ್ಞಾನದ ಒಂದೇ ತೊಡಕು ಅನಿಸುತ್ತದೆ. ಅರ್ಥದ ತೊಂದರೆ ಬರುವದಿಲ್ಲ. ಆದರೆ ಬೇಂದ್ರೆಯವರ ಶೈಲಿವಾಚಕನಿಂದ ವಿಶೇಷ ಪರಿಜ್ಞಾನವನ್ನು ಅಪೇಕ್ಷಿಸುತ್ತದೆ. ವಾಚಕನ ಕಲ್ಪನೆ, ಭಾವನೆ, ಊಹಾಶಕ್ತಿಗಳು ಎಷ್ಟು ಮಿಗಿಲೋ ಅಷ್ಟು ಬೇಂದ್ರೆಯವರ ಕಾವ್ಯದ ರಸಾಸ್ವಾದ ಹಿರಿದು. "ಗಂಗೆ ಇಳೆಗಿಳಿದಂತೆ" ಪುಟ್ಟಪ್ಪನವರ ಕಾವ್ಯದ "ಭಂಗಿ." ಅದನ್ನು ಬರೇ ನೋಡಿಯೇ ತಲೆದೂಗಬೇಕು. ಆದರೆ "ವಾಣಿ ವೀಣಾರವತೆ" ಬೇಂದ್ರೆಯವರ ಕಾವ್ಯ "ತಂಗಿ." ಅದನ್ನು ಕೇಳಿಯೇ ಸೊಗಸುಗಾರರು ಕರಗಬೇಕು.

ನಿಜವಾಗಿಯೂ ಶಬ್ದಶಕ್ತಿಯು ಬೇಂದ್ರೆಯವರ ಕೈಗೂಸಾಗಿದೆ. ಅವರು ಮಣಿಸಿದತ್ತ ಅವಳು ಮಣಿಯುತ್ತಾಳೆ. ಕುಣಿಸಿದಂತೆ ಕುಣಿಯುತ್ತಾಳೆ. ರಸಲೋಕದ ಅಷ್ಟಸಿದ್ಧಿಗಳನ್ನು ಅಂಬಿಕಾತನಯರು ತಮ್ಮ ಕಾವ್ಯ ತಪಸ್ಸಿನಿಂದ ಒಲಿಸಿಕೊಂಡಿದ್ದಾರೆ. ಕಾಳಿದಾಸನು ಆರಾಧಿಸಿದ ವಾಗರ್ಥಪ್ರತಿಪತ್ತಿಯೂ ವಾಗರ್ಥ ಸಂವ್ಯಕ್ತಿಯೂ ಬೇಂದ್ರೆಯವರಿಗೆ ಕರತಲಾಮಲಕವಾಗಿವೆ. ಬೇಂದ್ರೆಯವರ ಕವನದಲ್ಲಿರುವಷ್ಟು ಧ್ವನಿ ನಿಬಿಡತೆಯನ್ನು ಇನ್ಯಾವ ಹೊಸಗನ್ನಡ ಕವಿಯಲ್ಲಿಯೂ ನಾವು ಕಾಣೆವು. "ಮಾತು ಮಾತು ಮಥಿಸಿ ಬಂದವಾದದ ನವನೀತ"ವು ದಿವ್ಯವಾದ ಆಸ್ವಾದವನ್ನು ಕೊಡಬಲ್ಲದು. ಅವರು ಬಳಸುವ ವೃತ್ತಿ ಯಾವದೇ ಇರಲಿ, ಗತ್ತು ಏನೇ ಇರಲಿ, ಶೈಲಿ ಮಾರ್ಗವಿರಲಿ, ದೆಸೆಯಿರಲಿ, ಅವರು ಆಡಿದ ಮಾತುಗಳಿಗಿಂತ ಆಡದೇ ಬಿಟ್ಟ ಮಾತುಗಳು ಹೆಚ್ಚು ಆಳವಾಗಿರುತ್ತವೆ. ಹೀಗೆ ಪದಲಾಲಿತ್ಯದೊಡನೆ ಅರ್ಥಗೌರವವನ್ನೂ ಒಂದಾಗಿ ಹೊಂದಿಸಿಕೊಂಡು ಕವನ ಕಟ್ಟುವ ಸಿದ್ಧಹಸ್ತ ಬೇಂದ್ರೆಯವರದಲ್ಲದೇ ಬೇರೊಬ್ಬರದಿಲ್ಲ. ಈ ಧ್ವನಿ ನಿಬಿಡತೆ ಕೆಲವೊಮ್ಮೆ ದೋಷವೆನಿಸುವಷ್ಟು ಅತಿರೇಕಕ್ಕೆ ಹೋಗುವದುಂಟು. ಸೂಜಿಗೂ ಹದನು ಬಳಿ

ನೂಲಿಗೂ ಮಿದುವಾದ ನುಡಿಯ ಹದದಿಂದ ಬೇಂದ್ರೆಯವರು ತಮ್ಮ ಹಾಡುಗಳ ಬಿರುಕು ಬಿರುಕುಗಳಲ್ಲಿಯೂ ಅರ್ಥದ ಚಿನ್ನವನ್ನು ತುಂಬಿ ಹೇರುತ್ತಾರೆ. ಅದರ ಒಂದು ನುಡಿಯಲ್ಲಿ ಇರುವಷ್ಟು ಭಾವ, ಒಂದು ರೂಪಿತದಲ್ಲಿ ಬರುವಷ್ಟು ಊಹೆಯ ಅಂಶ ಹೊಸ ಕವಿಗಳಿಗೆ ತಮ್ಮ ಒಂದು ಇಡೀ ಕವನಕ್ಕೆ ಸಾಲಬಹುದಾಗಿದೆ.

ಈ ಧ್ವನಿನಿಬಿಡತೆಯೊಡನೆಯೇ ಹಾಸುಹೊಕ್ಕಾಗಿ ಹಬ್ಬಿದ ಇನ್ನೊಂದು ಕಾವ್ಯಗುಣವೆಂದರೆ, ಬೇಂದ್ರೆಯವರ ರೂಪಕೋತ್ಪ್ರೇಕ್ಷೆಗಳ ವಿಪುಲವಿಲಾಸ. ಇಷ್ಟೊಂದು ಕಲ್ಪನಾವೈಭವ ಇತರ ಕವಿಗಳಲ್ಲಿ ವಿರಳವೇ ಅನ್ನಬೇಕು. ಇವರ ವಾಗ್ವೈಖರಿಯ ಉಜ್ವಲ ಜಲಪಾತದಲ್ಲಿ ತೂರಾಡಿ ತೊಳಗುವ ಅಸಂಖ್ಯ ತುಂತುರು ನುಡಿಗಳೊಳಗಿಂದ ರಸಿಕರನ್ನು ಅಪ್ರತಿಭಗೊಳಿಸುವ ನೂರಾರು ಅಪ್ರತಿಮ ಇಂದ್ರಧನುಷ್ಯಗಳು ಕುಣಿದಾಡುತ್ತಿರುತ್ತವೆ. ಬೇಂದ್ರೆಯವರ ಈ ರೂಪಕಶಕ್ತಿ ನಿಜವಾಗಿಯೂ ಅದ್ಭುತವಿದೆ. ಒಂದು ಉಪಮೆ ಅವರಿಗೆ ಸಾಲದು. ಉಕ್ತಿಯ ಒಂದು ಭಂಗಿ ಅವರಿಗೆ ಸಾಕೆನಿಸದು. ಊಹೆಯ ಒಂದು ಪರಿಯಿಂದ ಅವರಿಗೆ ತೃಪ್ತಿ ಇಲ್ಲ. ತಮ್ಮ ಮಾತೆಲ್ಲ ಕಾವ್ಯಮಯ ಮಾಡುವಾಗ ಅವರು ಕಾವ್ಯವನ್ನೆಲ್ಲ ಉತ್ಪ್ರೇಕ್ಷೆಯ ಲೀಲಾಜಾಲವಾಗಿ ಹೆಣೆಯುತ್ತಾರೆ. ಅದೊಂದು ಮುತ್ತಿನ ನೀರಿನ ಎರಕ, ರತ್ನದ ರಸದ ಕಾರಂಜಿ. ಇದ್ದುದನ್ನು ಇದ್ದಂತೆ ಹೇಳಲು ಅವರು ಒಪ್ಪುವದೇ ಕಡಿಮೆ. ಅವರ ಅರ್ಥಾವಿಷ್ಕಾರವೆಲ್ಲ ರೂಪಕದಲ್ಲಿಯೇ ಸಿಗಬೇಕು. ಇದಕ್ಕೆ ತೀರ ವಿರುದ್ಧ ಧ್ರುವ ಮಾಸ್ತಿಯವರದು ಅವರಿಗೆ ಯಾವ ಒನಪು ಓರಣಗಳೂ ಬೇಡ. ಬೇಂದ್ರೆಯವರಿಗೆ ಶೈಲಿಯ ವಕ್ರತೆ ಎಷ್ಟು ಸಹಜವೋ ಅಷ್ಟೇ ಮಾಸ್ತಿಯವರಿಗೆ ಸರಳತೆ ಧಾರಾಳವಾಗಿದೆ. ಈ ತೀರ ಭಿನ್ನರುಚಿಯ ವೈಚಿತ್ರ್ಯದಿಂದಲೇ ಏನೋ ಅವರೀರ್ವರ ಗೆಳೆತನ ಅಷ್ಟೊಂದು ಮಾದರಿಯ ಎರಕವಾಗಿದೆ.

ಬೇಂದ್ರೆಯವರು ಶೈಲಿಯಲ್ಲಿಯ ಈ ರೂಪಕೋತ್ಪ್ರೇಕ್ಷೆಗಳ ಸ್ವೈರವಿಲಾಸದ ರೀತಿಯಲ್ಲಿ ಮರಾಠಿ ಸುಪ್ರಸಿದ್ಧ ಕವಿಗಳಾಗಿ ಹೋದ ಶ್ರೀ ಗಣೇಶ ರಾಮಗಡಕರಿಯವರಿಗೆ ಹೋಲುತ್ತಾರೆ. ಉಪಮೆ ಉತ್ಪ್ರೇಕ್ಷೆ ರೂಪಕಗಳನ್ನು ಹೀಗೆ ಮುಕ್ತ ಹಸ್ತದಿಂದ ತೂರಿ, ಭಾಷೆಯ ನಾದಮಾಧುರ್ಯ ಅರ್ಥ ಚಾತುರ್ಯಗಳ ಪರಮಾವಧಿಯನ್ನು ಸಾಧಿಸುವ ಈ ಶೈಲಿಯ ಚಮತ್ಕಾರವು ಕನ್ನಡದಲ್ಲಿ

ಬೇಂದ್ರೆಯವರಿಗೆ ಹೇಗೋ ಹಾಗೆಯೇ ಮರಾಠಿಯಲ್ಲಿ ಶ್ರೀ ಗಡಕರಿಯವರಿಗೂ ವಶವಾಗಿತ್ತು. ಇವರಿರ್ವರನ್ನೂ ಓದಿದವರಿಗೆ ಈ ಸಾಧರ್ಮ್ಯ ಹೊಳೆಯದೇ ಇರದು. ನನಗೂ ಅದು ಹೊಳೆದು, ಗಡಕರಿಯವರ ಅಲ್ಪ ಸ್ವಲ್ಪ ಪ್ರಭಾವವೇನಾದರೂ ಬೇಂದ್ರೆಯವರ ಮೇಲೆರಗಿರಬಹುದೇ? ಎಂಬ ವಿಚಾರ ನನ್ನಲ್ಲಿ ಆಗಾಗ್ಗೆ ಸುಳಿಯುತ್ತಿದ್ದು, ಕೊನೆಗೆ ಈ ವಿಷಯ ನಾನು ಶ್ರೀ ಬೇಂದ್ರೆಯವರನ್ನೇ ಕೇಳಿಕೊಂಡೆನು. ಆಗ ನನ್ನ ವಿಚಾರ ಒಂದು ಅರ್ಥದಿಂದ ನಿಜವಾಯಿತು. ಡೆಕ್ಕನ ಕಾಲೇಜಿನಲ್ಲಿ ಗಡಕರಿಯವರೂ ಬೇಂದ್ರೆಯವರೂ ಸಂತರಾಗಿದ್ದರು. ಗಡಕರಿಯವರ ಕಾವ್ಯದ ವಿಶೇಷ ಭಕ್ತರಲ್ಲಿ ಬೇಂದ್ರೆಯವರು ಒಬ್ಬರು ಆಗಿದ್ದರು. ಗಡಕರಿಯವರ ಕವನಗಳ ಕೈಬರಹ ಪ್ರತಿಗಳನ್ನೆಲ್ಲ ಕಾಲೇಜಿನಲ್ಲಿಯೇ ಒಂದೆಡೆಗೆ ಪ್ರದರ್ಶಿಸುವ ಚಿಕ್ಕ ಸಮಾರಂಭವನ್ನೂ ಬೇಂದ್ರೆಯವರು ಏರ್ಪಡಿಸಿದ್ದರಂತೆ. ಗಡಕರಿಯವರ ಕವಿತೆಗೆ ಬೇಂದ್ರೆಯವರು ತಮ್ಮ ಹೊಸ ಹರೆಯದಲ್ಲಿ ಅಷ್ಟೊಂದು ಮೆಚ್ಚಿದರು. ಇದೆಲ್ಲ ವಿಚಾರ ನನಗೆ ತಿಳಿಸಿ ಹೇಳಿ ಬೇಂದ್ರೆಯವರು ಮುಂದೆ ಹೀಗೆಂದರು. "ಗಡಕರಿಯವರ ಪ್ರೇರಣೆಯ ಒಂದು ಎಳೆ ನನ್ನಲ್ಲಿ ಎಲ್ಲಿಯೋ ಅಡಗಿ ಕೆಲಸಮಾಡುತ್ತಿರಲು ಸಾಕು. ಹಾಗೆಯೇ ಈಟ್ಸನ ಪ್ರತಿಭೆಯ ಒಂದು ಎಳೆಯೂ ನನ್ನಲ್ಲಿ ಎಲ್ಲೋ ಮನೆಮಾಡಿಕೊಂಡಿದೆಯೆಂದು ಹಲವರು ಅನ್ನುವದುಂಟು". ಇಲ್ಲಿ ಒತ್ತಿ ಹೇಳಬೇಕಾದ ಮಾತೆಂದರೆ ಬೇಂದ್ರೆಯವರು ಯಾರ ಅನುಕರಣವನ್ನು ಮಾಡಿದವರಲ್ಲ; ಮಾಡುವವರಲ್ಲ ಆದರೆ ಒಬ್ಬ ಹುಟ್ಟು ಕವಿಯು ಪ್ರಚಂಡ ವ್ಯಾಸಂಗಿಯೂ ಆಗಿದ್ದರೆ, ಅವನು ಮೆಚ್ಚಿದ ಕವಿಗಳ ಶೈಲಿಯ ಕೆಲವೊಂದು ಮಿರುಪು ಕಣ್ಣಾರೆ ಅವನ ಕಾವ್ಯದಲ್ಲಿ ಇಳಿದು ಅವನ ಶೈಲಿಗೆ ಒಂದು ಅಪೂರ್ವ ಕಳೆಯನ್ನು ತರುವುದುಂಟು. ಪಾಶ್ಚಾತ್ಯ ಸಂಗೀತವನ್ನು ಬಲ್ಲ ಭಾರತೀಯ ಗಾಯಕನ ಹಾಡುಗಾರಿಕೆಗೆ ಒಂದು ವಿಚಿತ್ರ ಸೌಂದರ್ಯ ಬರುವದಿಲ್ಲವೇ? ಹಾಗೆಯೇ ಸರಿ.

ಬೇಂದ್ರೆಯವರ ಕಾವ್ಯದ ಇನ್ನೊಂದು ಮುಖ್ಯ ಗುಣವೆಂದರೆ ಅದರ ಔಚಿತ್ಯ. ವೃಥಾಪಲ್ಲವ ಅವರದಲ್ಲ. ಸಾರ್ಥಕ ಶಬ್ದ ಪ್ರಯೋಗ ಅವರದು ಸಹಜ ಗುಣ. ಹಲವು ಕವಿಗಳು ನಾದಮಾಧುರ್ಯವನ್ನು ಸಾಧಿಸಲು, ಬರೇ ಅನುಪ್ರಾಸ

ಅಂತ್ಯಪ್ರಾಸಗಳ ಮೋಹಕ್ಕಾಗಿ ಶಬ್ದಗಳನ್ನು ಎಳೆದು ತಂದು ಹೆಣೆಯಲು ಹೆಣಗುವದುಂಟು. ಆದರೆ ಮಾಧುರ್ಯವನ್ನು ಸಾಧಿಸಿಯೂ, ಪ್ರಾಸ, ಪ್ರಸಾದ, ಮಾತ್ರೆ ವೃತ್ತಗಳಿಗೆ ಭಂಗ ಬಾರದಂತೆಯೇ "ಬಂಧವಿರದೆ ಬಂಧುರ"ವಾಗಿ "ಸ್ವಚ್ಛಂದ ಸುಂದರ"ವಾಗಿ ಬೇಂದ್ರೆಯವರು ಶಬ್ದಗಳ ಉಚಿತ ಮತ್ತು ಖಚಿತ ಪ್ರಯೋಗ ಮಾಡಬಲ್ಲರು. ಈ ಶಬ್ದಸಿದ್ಧಿಯನ್ನು ಅವರ ಯಾವದೇ ಚಿಕ್ಕ ದೊಡ್ಡ ಕವನದಲ್ಲಿ ಅನುಮಾನವಾಗಿ ಎತ್ತಿ ಕಾಣಿಸಬಹುದಾಗಿದೆ. ಇವರ ಒಂದೇ ಒಂದು ಅದ್ವಿತೀಯ ಉದಾಹರಣೆಯೆಂದರೆ "ಕನಸಿನಲ್ಲಿ ಒಂದು ಕಣಸು." ಅದರಲ್ಲಿಯ ಅರ್ಥಸ್ವಾರಸ್ಯ ಶಬ್ದಾರ್ಥ ಸಾಮರಸ್ಯಗಳನ್ನು ಅಷ್ಟೊಂದು ಹದವಾಗಿ ನಾವು ಯಾವ ಕವಿಯ ಕವನಗಳಲ್ಲಿಯೂ ಕಾಣೆವು. ಅದರಲ್ಲಿಯ ನುಡಿಗಳೇ ಪದಗಳನ್ನು ರವೆಮಾತ್ರವೂ ಬದಲಿಸುವದು ಶಕ್ಯವಿಲ್ಲ. ಹೀಗೆ "ಅರಿವಿನಾಳದ ಅಣಿಮುತ್ತುಗಳನ್ನು ಪವಣಿಸುವ ಜಾಣು ಬಗೆ" ಬೇಂದ್ರೆಯವರಿಗೆ ಮೀಸಲಾದದ್ದು. ಲಲಿತ ಸಾಹಿತ್ಯದ ಜೀವಾಳವೇ ಔಚಿತ್ಯ. ಈ ಔಚಿತ್ಯ ಬೇಂದ್ರೆಯವರ ಕವನದಲ್ಲಿ ಓತಪ್ರೋತವಾಗಿದೆ. ಔಚಿತ್ಯಕ್ಕಾಗಿ ವಾಕ್ಯದಲ್ಲಿ ಸಂಯಮ, ಶಬ್ದಗಳಲ್ಲಿ ಸಂಕ್ಷೇಪ, ಕಲ್ಪನೆಯಲ್ಲಿ ಕೇವಲ ಸೂಚಕತೆ, ಇವೆಲ್ಲ ತುಂಬಿ ಬಂದು ಬೇಂದ್ರೆಯವರ ಕವನ ಓದಲು ತಿಳಿಯಾಗಿದ್ದರೂ ಕೆಲವೊಮ್ಮೆ ರಸಿಕರ ಅರ್ಥದ ನಿಲುಕಿಗೆ ದೂರವಾಗಿ ನಿಲ್ಲುವದುಂಟು. ಆದರೆ ಇದು ಗುಣಾತಿರೇಕದ ದೋಷ, ಗುಣಾಭಾವದ ಪಾಪವಲ್ಲ.

ಇನ್ನು ಬೇಂದ್ರೆಯವರ ಪ್ರತಿಭೆಯ ಚತುರ್ಮುಖ ಸೌಂದರ್ಯದ ಬಲದ (ಮೂರನೆಯ) ಮುಖವೆಂದರೆ ಅವರ ಸವ್ಯಸಾಚಿಯಾದ ವಿದ್ವತ್ತು. ಪಾಂಡಿತ್ಯವು ಕಾವ್ಯವನ್ನು ಕೆಡಿಸುವದೆಂಬ ಸಾಮಾನ್ಯ ನಿಯಮಕ್ಕೆ ಬೇಂದ್ರೆಯವರು ಸುಂದರ ಅಪವಾದವಾಗಿದ್ದಾರೆ. ಬೇಂದ್ರೆಯವರ ವ್ಯಾಸಂಗ ಸರ್ವತೋಮುಖವಾದದ್ದು. ಅವರ ವಿಮರ್ಶಣ ವಿಚಕ್ಷಣತೆ ಸರ್ವಗಾಮಿಯಾದದ್ದು. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಇವೆರಡೂ ತತ್ವಶಾಸ್ತ್ರಗಳನ್ನೂ ಒಂದೇ ಆಸಕ್ತಿಯಂತೆ ಅವರು ಅವಲೋಕಿಸಿದರು. ಪ್ರಾಚೀನ-ಅರ್ವಾಚೀನ ಇವೆರಡೂ ವಿಚಾರಪದ್ಧತಿಗಳನ್ನು ಅವರು ಒಂದೇ ಅಭಿರುಚಿಯಿಂದ ಅಭ್ಯಸಿಸಿದವರು. ಹೀಗಾಗಿ ಅವರ ತತ್ವಪ್ರತಿಪಾದನೆಗೆ ಒಂದು ಅಲೌಕಿಕವಾದ ಸ್ವಾದವಿರುತ್ತದೆ. ಯಾವ ವಿಚಾರವೆ ಇರಲಿ, ಹೃದಯಂಗಮವಾಗಿ

ವಿವರಿಸುವದರಲ್ಲಿ ಅವರ ಕೈಹಿಡಿಯುವವರು ಯಾರೂ ಇಲ್ಲವೆನ್ನಬಹುದು. ಈ ಹೃದಯಂಗಮತೆಯ ಕಾರಣ, ಅವರು ಪಟ್ಟ ಪರಿಪಾಕ. ಅವರ ಗಾಢವಾದ ವಿದ್ವತ್ತೆ ಒಂದು ಸಂಭಾರವಾಗಿ ತುಂಬಿಕೊಂಡಿಲ್ಲ. ಒಂದು ಸಂಸ್ಕಾರವಾಗಿ ಬಿಂಬಿಸಿದೆ. ಹಲವು ವಿದ್ವನ್ಮಣಿಗಳು ತಮ್ಮ ಪ್ರಚುರ ಪಾಂಡಿತ್ಯದಿಂದ ನಮ್ಮನ್ನು ಬೆರಗುಗೊಳಿಸಿರುವುದುಂಟು. ಆದರೆ ಅವರ ಮಿದುಳೆಂದರೆ ಒಂದು ಗ್ರಂಥಸೂಚಿಯಾಗಿರುವುದೂ ಉಂಟು. ಯಾರು ಏನೆಂದರು–ಇದನ್ನಷ್ಟೇ ಅವರಿಂದ ನಾವು ತಿಳಿಯಬಹುದು. ಆದರೆ ಈ ವಿದ್ಯಾಭ್ಯಾಸ ಜಡತ್ವ ಬೇಂದ್ರೆಯವರದ್ದಲ್ಲ. ಅವರು ಹಲವು ಹೂಗಳಿಂದಲೂ ರಸವೀಂಟಿ ತಮ್ಮದೇ ಜೇನುಪಾನ ಮಾಡಿ ನಮಗೆ ಸವಿಸಬಲ್ಲರು. ಅವರ ವಿದ್ವತ್ತೆ ಅವರಿಗೆ ಭಾರವಾಗುವುದಿಲ್ಲ. ನವಿಲು ಗರಿಗೆದರಿ ತನ್ನ ವರ್ಣವೈಭವವನ್ನು ಸಡಗರದಿಂದ ಸಹಜವಾಗಿ ತೋರುವಂತೆ ಬೇಂದ್ರೆಯವರ ವಿಶಾಲಜ್ಞಾನ ವಿಸ್ತಾರವಾಚನ ಅವರ ಮಾತುಕತೆಗಳಲ್ಲಿ ಲೀಲೆಯಿಂದ, ಲಾಲಿತ್ಯದಿಂದ ವ್ಯಕ್ತವಾಗುತ್ತದೆ.

ಇಂಥ ಕವಿ ಕನ್ನಡನಾಡಿಗೆ ದೊರೆತದ್ದು ನಮ್ಮ ಪುಣ್ಯ. ನಮ್ಮ ನೆರೆಯ ಯಾವ ನಾಡಿನಲ್ಲಿಯೂ ಇವರ ಸರಿತೂಕದ ಕವಿಯಿಲ್ಲವೆಂದರೆ ತೂಕ ತಪ್ಪಿದ ಮಾತಾಗದು. ಹೊಸಗನ್ನಡ ಕಾವ್ಯ ನೆರೆಯ ಯಾವ ಪ್ರಾಂತದ ಕಾವ್ಯಕ್ಕೂ ಮಿಗಿಲಾದ ನಿಧಿಯೂ ಇಂದಿನ ಕನ್ನಡದ ಎಲ್ಲೆಡೆಯ ವಿಪನ್ನಾವಸ್ಥೆಯಲ್ಲಿ ನಮ್ಮ ಕಾವ್ಯ ಸಂಪತ್ತಿಯೊಂದೇ ನಾವು ಹೆಮ್ಮೆಪಡಬೇಕಾದ ಭಾಗ್ಯವಾಗಿದೆ.

(ಜೀವನ ೧೯೪೬)

## 'ಬಾ ಭೃಂಗವೆ'

ಕವಿವರ್ಯರೂ, ವರಕವಿಗಳೂ ಆದ ಪೂಜ್ಯ ಬೇಂದ್ರೆಯವರ- 'ಅಂಬಿಕಾತನದತ್ತ'ರ ಕಾವ್ಯದೃಷ್ಟಿಯನ್ನು ಕುರಿತು ಬರೆಯಲು ಹೊರಟಿದ್ದೇನೆ. ಆದರೆ ಆರಂಭದಲ್ಲಿಯೇ ಒಂದು ತೊಡಕು - ತೊಡಗುವುದರಿಂದಲೇ ಈ ತೊಡಕು. ಇಲ್ಲಿ ವರಕವಿಗಳ ಕಾವ್ಯದೃಷ್ಟಿ ಅಂದರೆ ಖಚಿತವಾಗಿ ಏನು?

ಕಾವ್ಯದ ಬಗೆಗೆ-ಅದರ ಸ್ವರೂಪ, ಸತ್ವ, ಕಾರ್ಯ, ಗುಣಧರ್ಮಗಳ ಬಗೆಗೆ ಕವಿಯ ದೃಷ್ಟಿಯೇ? ಅಥವಾ ಈ ಮಹಾಕವಿಯ ಕಾವ್ಯದಲ್ಲಿ ವ್ಯಕ್ತವಾಗುವ ಅವರ ಸಮಗ್ರ ಸಮ್ಯಕ್ ದೃಷ್ಟಿಯೇ? ನಿಸರ್ಗ, ಜೀವನ, ನಿಯತಿ, ವಿಶ್ವ, ಮಾನವತೆ ಹಾಗೂ ಅಧಿಭೂತ ಆಧ್ಯಾತ್ಮಗಳ ಬಗೆಗೆ ಕವಿಯ ದರ್ಶನವೇ? ಅಥವಾ, ಒಟ್ಟೂ ಅನುಭವವನ್ನು, ಅದರ ಅಭಿವ್ಯಕ್ತಿಯನ್ನು ತನ್ನ ವ್ಯಾಪ್ತಿ ದೀಪ್ತಿಯಿಂದ ರೂಪಿಸುವ ಈ ಕವಿಯ ವಿಶಿಷ್ಟ ಕಾವ್ಯಾತ್ಮಕ ದೃಷ್ಟಿಯೇ? ಅಥವಾ, ತಮ್ಮ ಕಾವ್ಯದ ಕುರಿತು ಕವಿವರ್ಯರು ಇಟ್ಟುಕೊಂಡ ಉದ್ದೇಶದ, ಪ್ರಯೋಜನದ ಹಾಗೂ ಅಂತಃಸಂಸ್ಕಾರದ ಒಂದು ಸುಸ್ಲಿಷ್ಟ ದೃಷ್ಟಿಯೇ?

ನನ್ನ ದುರ್ದೈವವೆಂದರೆ ಈ ನಾಲ್ಕೂ ದೃಷ್ಟಿಗಳಿಂದ ಈವರೆಗೆ ಬೇಂದ್ರೆಯವರ ಕಾವ್ಯದ ಬಗೆಗೆ ಅನೇಕ ಶ್ರೇಷ್ಠ ವಿದ್ವಾಂಸರಿಂದ, ಕಾವ್ಯ ವಿಮರ್ಶಾತಜ್ಞರಿಂದ ಸಾಕಷ್ಟು ವಿವರಣೆ, ವಿವೇಚನೆ ಆಗಿದ್ದಿದೆ. ಕೆಲವು ವಿಶ್ಲೇಷಣೆಯೂ ಆಗಿವೆ. ಇಂಥ ಅನೇಕ ಬಿಡಿ ಬರಹಗಳ ಹೊರತಾಗಿ ವಿ.ಕೃ.ಗೋಕಾಕರ "ಬೇಂದ್ರೆ ದ ಪೊಯೆಟ್ ಎಂಡ್ ಸೀಯರ್", ಕೀರ್ತಿನಾಥ ಕುರ್ತಕೋಟಿಯವರ ತೀರ ಈಚಿನ "ಭೃಂಗದ ಬೆನ್ನೇರಿ", ಅಲ್ಲದೆ ಹಿಂದೆ "ಬೇಂದ್ರೆ ವ್ಯಕ್ತಿ ಮತ್ತು ಕಾವ್ಯ"ದ ಬಗೆಗಿನ ಉದ್ಗ್ರಂಥ, ಜಿ.ಎಸ್.ಶಿವರುದ್ರಪ್ಪನವರು ಬೇಂದ್ರೆ ಕಾವ್ಯದ ಸ್ವರೂಪದ ಕುರಿತು, ಆ ಕವಿಗಳ ಮಾತಿನಿಂದಲೇ ಆಯ್ದು ನಿರೂಪಿಸಿದ ಪ್ರಬಂಧ, ಬಿ.ಎಚ್.ಶ್ರೀಧರರು ಪ್ರಕಟಿಸಿದ "ಬೇಂದ್ರೆ" ಪುಟ್ಟ ಪ್ರಚಾರೋಪನ್ಯಾಸ, ಶ್ರೀ ಸಿಂಪಿ ಲಿಂಗಣ್ಣನವರು ಬೇಂದ್ರೆ ಕಾವ್ಯದ ವಿಷಯವಾಗಿ ಬರೆದ ಒಂದು ಪುಸ್ತಕ ಇವೆಲ್ಲ ಈ ವಿಮರ್ಶೆಯ ವೀಥಿಯನ್ನು ಬೆಳಗುವ, ವಿಶದಗೊಳಿಸುವ ದೀಪಸ್ತಂಭಗಳು.

ಇದಕ್ಕೆಲ್ಲ ಅವಷ್ಟಂಭಕವಾಗಿ ಬೇಂದ್ರೆಯವರೇ ಬರೆದ "ಆತ್ಮಕಥನ"ವಿದೆ. "ನನ್ನ ಕಾವ್ಯೋದ್ಯೋಗ"ವೆಂಬ ಅನ್ಯಾದೃಶ ಪ್ರಬಂಧವಿದೆ. ಅವರೂ ಅವರ ವಿದ್ವಾನ್ ಸುಪುತ್ರ ವಾಮನ ಬೇಂದ್ರೆಯವರೂ ಕೂಡಿ ಅವರ ಕವನ ಸಂಕಲನಗಳಿಗೆ

ಸೇರಿಸಿದ ಸಂದರ್ಭಸೂಚಿಯಾದ ಅಮೂಲ್ಯ ಹಿನ್ನುಡಿ ಟಿಪ್ಪಣಿಗಳಿವೆ. ಇವೂ ಸಾಲದ್ದಕ್ಕೆ ಕವಿವರ್ಯರ ಎಂಬತ್ತೊಂದನೆಯ ಹುಟ್ಟುಹಬ್ಬದ ನಿಮಿತ್ತ ಸನ್ಮಿತ್ರ ಶ್ರೀ ಮನೋಹರರಾವ್ ಘಾಣೇಕರರು ಪ್ರಕಟಿಸಿದ "ಇಳಿದು ಬಾ ತಾಯಿ" ಎಂಬ ಅಪ್ರತಿಮ ಮಹಾಸಂಪುಟವಿದೆ. ಅಲ್ಲಿ ಈ ಸಮುಜ್ವಲ ಪ್ರತಿಭಾರತ್ನದ ಅಷ್ಟಪೈಲುವಾದ ಓಜತೇಜದ ಐಶ್ವರ್ಯವು ದಿಟವಾಗಿಯೂ, ಪರಿಸ್ಫುಟವಾಗಿಯೂ ವ್ಯಕ್ತವಾಗಿದೆ.

ಇಷ್ಟೆಲ್ಲ ಹೆಬ್ಬೆಳಕಿನ ಹೊಳೆಯಲ್ಲಿ ನನ್ನ ಈ ಬಡ ಸೊಡರು ತೇಲಿಬಿಡುವದಾದರೂ ಏಕೆ? ಈ ಪ್ರಶ್ನೆ ನನಗೆ ನಾನೇ ಹಾಕಿಕೊಂಡಿದ್ದೇನೆ. ಅದಕ್ಕೆ ಸರಿಯಾದ ಉತ್ತರವಿಲ್ಲ. ಇದ್ದರೆ ಇಷ್ಟೇ – ನಾನು ನನ್ನ ಈ ಕಾವ್ಯಗುರುವನ್ನು ಕಾವ್ಯಾತ್ಮಕವಾಗಿ ಅರಿತುಕೊಂಡಿದ್ದೇನು? ಅದರ ಪ್ರಯತ್ನ ಎಂತಹದು ಎಂಬುದು ನನಗೇ ಮನದಟ್ಟಾಗಲೆಂದು, ಅದನ್ನೇ ಇಲ್ಲಿ, ಮೂಲತಃ ನನ್ನ ತಿಳುವಳಿಕೆಯನ್ನು ತಿಳಿಗೊಳಿಸುವದಕ್ಕಾಗಿಯೇ ತೋಡಿಕೊಳ್ಳುತ್ತಿದ್ದೇನೆ.

ಕವಿಯ ಭಾವ, ಕಾವ್ಯದ ಸತ್ಯ – ಒಬ್ಬರು ಒಮ್ಮೆ ಹೇಳಿ ಮುಗಿಯಿತೆಂಬುದಿಲ್ಲ, ತಿಳಿದು ತೀರಿತೆಂಬುದಿಲ್ಲ. "ನಿನ್ನ ಕಿರಣ ನಿನಗೆ ಹಗಲು, ಉಳಿದ ಬೆಳಕು ಕತ್ತಲು"ಅಂದಿದ್ದಾರೆ ಬೇಂದ್ರೆ, ತಮ್ಮ ಒಂದು ಪ್ರಸಿದ್ಧ ಕವನದಲ್ಲಿ. ಈ ತತ್ವ ಬರಿ 'ಎಷ್ಟು ಪ್ರೀತಿ' ಎಂಬುದನ್ನು ಇತ್ಯರ್ಥಗೊಳಿಸುವ ಮಟ್ಟಿಗೇ ಅನ್ವಯಿಸುವುದಿಲ್ಲ. ಹೃದಯದ ಪ್ರೀತಿಯಷ್ಟೇ ಕಾವ್ಯದ ಪ್ರೇಮಕ್ಕೂ ಇದು ಅಷ್ಟೇ ಪಟುವಾಗಿ ಅನ್ವಯಿಸುತ್ತದೆ. ಇದೊಂದು ಆತ್ಮಸಾಕ್ಷಾತ್ಕಾರ. ಪ್ರತಿಯೊಬ್ಬ ಸಹೃದಯನಲ್ಲಿಯೂ ಪ್ರತಿಯೊಂದು ಕವನದ ಪ್ರತಿಯೊಂದು ಓದಿಗೂ ಆ ಭಾವ, ಆ ಸತ್ವ ಸಾಕ್ಷಾತ್ಕಾರಗೊಳ್ಳುತ್ತದೆ. "ನಿಂತ ನಿಲುವೆಲ್ಲ ತ್ರಿಭಂಗಿ" ಆದಾಗ ನಮ್ಮ ಕಣ್ಣಿನ ನೋಟ–ನೋಟಕ್ಕೂ, ಆಯಾ ನೋಟದ ಕೋನ ಕೋನಕ್ಕೂ ಆ ನಿಲುವಿನ ಚೆಲುವು ತನ್ನ ಭಾವಭಂಗಿಯನ್ನು ಹೊಸ ಹೊಸತಾಗಿ ತೋರಿದರೆ ಅದೇನು ಭ್ರಮೆಯಲ್ಲ, ಸೋಜಿಗವೂ ಅಲ್ಲ.

ಅಥವಾ, ಅದುವೇ ನಿಜವಾದ ಕಾವ್ಯದ ಸೋಜಿಗ. ಅದುವೇ ಪ್ರತಿಭೆಯ ನವ–ನವೋನ್ಮೇಷ. "ಎ ಥಿಂಗ್ ಆಫ್ ಬ್ಯೂಟಿ ಈಜ್ ಎ ಜಾಯ್ ಫೋರ್ ಎವ್ಹರ್"–ಅಂದ 'ಕೀಟ್ಸ್'. ಇದನ್ನೇ ಹೆಚ್ಚು ನಿಖರವಾಗಿ, ಅವನಿಗೂ ಶತಮಾನಗಳಾಚೆ ನಮ್ಮ ಭಾರವಿ ಸಾರಿದ್ದ: "ಕ್ಷಣೇ ಕ್ಷಣೇ ಯತ್ ನವತಾಂ ಉಪೈತಿತ ದೇವರೂಪಂ ರಮಣೀಯತಾಯಾಃ" ರಮಣೀಯತೆಯ ಈ ನಿತ್ಯ ನವೋನವರೂಪವು ಎಲ್ಲ ಸೌಂದರ್ಯದಂತೆ ಉತ್ತಮ ಕಾವ್ಯದ್ದೂ ಅಂತಃಸತ್ವವು. "ಕೊಹಿನೂರ್" ವಜ್ರ

ಉಜ್ವಲ ಕಾಂತಿಯದಾಗಿತ್ತು. ಇದನ್ನು ಇಂಗ್ಲೆಂಡಿಗೆ ಒಯ್ದ ಮೇಲೆ ಅಲ್ಲಿಯ ರತ್ನಕಾರರು ಇನ್ನೂ ಹೊಸ ಪೈಲುಗಳನ್ನು ಕೆತ್ತಿದರು. ಆಗ ಅದರ ಕಾಂತಿ ಹಾಗೂ ಕಿರಣಪುಂಜಗಳು ಇನ್ನೂ ಉಜ್ವಲವಾಗಿ ವರ್ಣರಂಜಿತವಾಗಿ ತೂರಿ ತೊಳಗಿದವಂತೆ.

ಬೇಂದ್ರೇ ಕಾವ್ಯ ಅಂಥ ಒಂದು ಕೊಹಿನೂರು. ನಮ್ಮ ನಮ್ಮ ದೃಷ್ಟಿಕೋನದಂತೆ ಅದರ ಸೌಂದರ್ಯ-ಕಾಂತಿ ಹೊಚ್ಚ ಹೊಸ ಸೃಷ್ಟಿಯಾಗಿ ಕಾಣುತ್ತದೆ. ಅದರಿಂದ ನಾನು ಕಂಡ ಕಿರಣ, ಅದರಿಂದ ನನ್ನ ಹೃದಯಕ್ಕೆ ಆದ ಹಗಲು, ನಾನು ನನ್ನ ಸಮಾನಧರ್ಮರೊಂದಿಗೆ ಹಂಚಿಕೊಳ್ಳಬೇಕೆಂಬ ಹಂಬಲವೇ ನನ್ನ ಈ ಚಾಪಲ್ಯಕ್ಕೆ ಕಾರಣ. ಅಲ್ಲದೆ ಬೇಂದ್ರೇ ಕಾವ್ಯವಿಮರ್ಶೆಯಲ್ಲಿ ಏನೋ ಒಂದು ಕೊರತೆಯನ್ನು ನಾನು ತುಂಬುತ್ತಿದ್ದೇನೆಂಬ ಭ್ರಾಂತಿ ನನಗಿಲ್ಲ.

ಹಾಗೆ ನೋಡಿದರೆ ಬೇಂದ್ರೆಯವರ ಕಾವ್ಯದ ಕುರಿತು ವಿಮರ್ಶಾಕೃತಿಗಳು ಎಷ್ಟು ಬೇಕೋ ಅಷ್ಟು ಬಂದೇ ಇಲ್ಲವೆಂದರೆ ತಪ್ಪಿಲ್ಲ. ಉದಾಹರಣೆಗೆ, ಮರಾಠೀ ರಮ್ಯಕಾವ್ಯದ, ರಸ ಸಂಪ್ರದಾಯದ ಅಥವಾ ಆಧುನಿಕ ಮರಾಠೀ ಕಾವ್ಯದ ಜನಕರೆಂದು ಖ್ಯಾತಿವೆತ್ತ ದಿ.ಕೇಶವಸುತರನ್ನೇ ಕೊಳ್ಳಿರಿ. ಅವರು ಪ್ಲೇಗಿನಿಂದ ಅಕಾಲ ಮೃತ್ಯುವಿಗೆ ಬಲಿಯಾದರು. (ಅದೂ ಧಾರವಾಡದಲ್ಲಿ ಅಧ್ಯಾಪಕ ವೃತ್ತಿಯಲ್ಲಿ ನಿರ್ವಾಹ ನಡೆಯಿಸುತ್ತಿದ್ದಾಗ, ಹುಬ್ಬಳ್ಳಿಯಲ್ಲಿ) ಅವರು ಬರೆದು ಪ್ರಕಟಿಸಿದ ಕವನಸಂಕಲನ ಒಂದೇ ಒಂದು. ಅದೂ ಇನ್ನೂರು ಪುಟ ಕೂಡ ತುಂಬಿಲ್ಲ. ಆದರೆ ಈವರೆಗೆ ಆ ಪುಟ್ಟ ಪುಸ್ತಕದ ಬಗೆಗೆ ನೂರಕ್ಕೆ ಮಿಕ್ಕಿ ಹಿರಿ-ಕಿರಿ ವಿಮರ್ಶಾ ಪುಸ್ತಕಗಳು ಮರಾಠಿಯಲ್ಲಿ ಪ್ರಕಟವಾಗಿವೆ. ಅವರ ಕಾವ್ಯದ ವಿಚಿಕಿತ್ಸೆಗೆ ಮೀಸಲಾದ ಲೇಖನ ಪ್ರಬಂಧಗಳಿಗಂತೂ ಲೆಕ್ಕವೇ ಇಲ್ಲ.

ಮರಾಠಿಗೆ 'ಕೇಶವಸುತ'ರು ಹೇಗೋ, ಹಾಗೆಯೇ ನಮಗೆ ಬೇಂದ್ರೆ, ಕುವೆಂಪು. ಅವರಿಗೂ ಮೊದಲು ಕವಿ ಮುದ್ದಣ (ಕೇಶವಸುತರಂತೆಯೇ ಅಲ್ಪಾಯುಷಿ) ಆಧುನಿಕ ಕನ್ನಡ ಕಾವ್ಯದ ನವೋದಯದ 'ಮೂಡಲ ಮನೆಯ ಬಾಗಿಲ ತೆರೆದು ಮುತ್ತಿನ ನೀರಿನ ಎರಕ ಹೊಯ್ದವರು, ಬೆಳಕು ಹರಿದು ಜಗವೆಲ್ಲ ತೊಯ್ದವರು.' ಈ ಉದ್ದಾತ್ತರುಗಳ ಬಗೆಗೆ ಅದೆಷ್ಟೋ ಸಮೀಕ್ಷಣ-ಪರೀಕ್ಷಣಗಳ ಗ್ರಂಥಗಳು ಹೊರಬರಬೇಡವೆ? ಆದರೆ ಈ ಕೃಷಿಗೆ ಕೈ ಹಾಕಿದವರೆಷ್ಟು? ಅವರ ಕೈಗೆ ಬಂದ ಫಸಲೆಷ್ಟು? ಅಂದಾಗ ಇದೊಂದು ಅಲ್ಪಕೃತಿ. ಮುಂದೆ ಬರುವ ದುಡುಕಿಗಾಗಿ ನಾನು ದುಗುಡಪಡಬೇಕಾಗಿಲ್ಲ. ಇದು ಒಂದು ಆತ್ಮಸಮರ್ಥನೆಯೂ ಅಲ್ಲ, ಕ್ಷಮಾಪ್ರಾರ್ಥನೆಯೂ ಅಲ್ಲ.

"ಕಂಪಿನ ಕರೆಯಿದು ಸರಾಗವಾಗಿರೆ
ಬೇರೆಯ ಕರೆ ಬೇಕೇ?"

–ಎಂದು ಅಂಬಿಕಾತನಯದತ್ತರೇ ರಸಿಕರಿಗೆ ನೇರ ಸವಾಲು ಹಾಕಿದ್ದಾರೆ. ಆದರೆ ಈ ರಸಿಕ ಭೃಂಗ ವಿರಾಗಿಯಂದದಿ ಭ್ರಮಿಸುವ ಸ್ವಚ್ಛಂದಿ. ಅಂಥವರಿಗೆ 'ಕಂಪಿನಕರೆ'ಯನ್ನು ಗಮನಿಸುವಂತೆ ಬೇರೆ ಕರೆಯೊಂದು ಬೇಕೆನಿಸುತ್ತದೆ. "ಈ ಕಂಪು ಏನು? ಈ ಗುಂಗುಂ ಗಾನ ಏನು? ಏನು? ಜೇನು! ಜೇನು!" –ಎಂಬ ಇಂಗಿತವನ್ನಾದರೂ ಬಿಡಿಸಿ ತಿಳಿಸಿ ಹೇಳುವ ಮಟ್ಟಿಗೆ ಈ "ಬೇರೆಯ ಕರೆ" ಬೇಕೇನೋ. ಅದಕ್ಕಾಗಿಯೇ ಈ ನನ್ನ ಪ್ರಯತ್ನ. "ಯಾರಿಗೆ ಬೇಕೈತಿ ನಿನ್ನ ಕವಿತಾ? ಬ್ರೆಡ್ ತಾ ಮ್ಯಾಲ ಬೆಣ್ಣಿ ತಾ, ಇಲ್ಲಾ ಎಣ್ಣಿ ತಾ" ಎಂದು ಒತ್ತಾಯದಿಂದ ಬೇಡುವ ಅರಸಿಕರಲ್ಲಿ ಕವಿತ್ವ–ನಿವೇದನ ಮಾಡಲು ಮಾತ್ರ ನಾನು ಹೊರಟಿಲ್ಲ. "ತೇಷಾಂ ಪ್ರತಿ ನ ಏಷಃ ಯತ್ನಃ"

ಇದು "ಬೇಂದ್ರೆ ಬೇಕರಿ ಬ್ರೆಡ್ಡು". ಬೆಣ್ಣೆಯಲ್ಲಿಯೇ ಭಟ್ಟಿ ಇಳಿಸಿದ್ದು. ಆದರೂ 'ಭಟ್ಟೀ ಕಾವ್ಯ'ದಂತೆ ಅಲ್ಲ. "ಸೋಗು ತಿಂದಿತು ಕವಿಯ, ಭೋಗ ತಿಂದಿತು ಭವಿಯ..... ಕ್ಷಣಕ್ಷಣಕು ರಾಗ ತಿಂದಿತು ಪದಗಳನ್ನ!" ಎಂದಿದೆ ಇವರ ಒಂದು ಸೂಸಲ ನಗೆಯ ಸೂಕ್ತಿ. ಆದರೆ ಇವರ ಕಾವ್ಯಕ್ಕೆ ಇಂಥ ಸೋಗಿನ ರಾಗ ಅಥವಾ ರಾಗದ ಸೋಗು, ಬರೆ ಭವಿಯನ್ನು ತಿನ್ನುವ ಭೋಗ ತಿಂದಿಲ್ಲ. (ಭೋಗಾಃ ನ ಭುಕ್ತಾಃ। ವಯಂ ಏವ ಭುಕ್ತಾಃ॥) ಈ ಕವಿಯ ಭಟ್ಟಿಯಿಂದ ಬಂದ ಬ್ರೆಡ್ ಹೇಗೆ ಸವಿಯಬೇಕು?

"ತಿಂದ ಮಾತಿವು ಎಂದು। ಉಗುಳ ಬ್ಯಾಡಿರಿ ಮರಳಿ।
ನುರಿಸಿ ನೋಡಿರಿ ತಿರುತಿರುಗಿ। ನೆನೆಸಿದರೆ
ರಸವು ಹುಟ್ಟೀತು ರಸಿಕತೆಗೆ

ಈ ಚರ್ವಣದಿಂದಲೇ ಕಾವ್ಯದ ಆಸ್ವಾದ, ಅದಕ್ಕೇ ಈ ಚರ್ಚೆಗೆ ಆಸ್ಪದ.

ಕವಿಯ ವ್ಯಕ್ತಿತ್ವದ ಹಾಗೂ ಕವಿತ್ವದ ಪರಿಚಯ ಆದಷ್ಟು ಹೆಚ್ಚು ಮಗ್ಗಲುಗಳಿಂದ, ಆದಷ್ಟು ಹೆಚ್ಚು ಮಟ್ಟಗಳಲ್ಲಿ, ಆದಷ್ಟು ಹೆಚ್ಚು ಮಟ್ಟಿಗೆ ಜನತೆಗೆ ಮಾಡಿಕೊಡುವದು ಎಂದಿಗಿಂತ ಹೆಚ್ಚಾಗಿ ಇಂದು ಅವಶ್ಯ. ಈ ನಿಟ್ಟಿನಲ್ಲಿ ಪಂಡಿತರು ಪಂಡಿತರಿಗಾಗಿ ಬರೆದುದಕ್ಕಿಂತ, ಪಂಡಿತರು ಪಾಮರರಿಗಾಗಿ ಬರೆಯಬೇಕಾದದ್ದು ಇನ್ನೂ ಹೆಚ್ಚು ಅವಶ್ಯ. ಅಲ್ಲಿಯೂ ಪಂಡಿತ–ಪಾಮರರಿಗೆ ಕೂಡಿಯೇ ವೇಧಕವೂ ಬೋಧಕವೂ ಆಗುವಂತೆ ಬರೆಯುವದು ತುಂಬ ಕಷ್ಟದ ಕೆಲಸ.

ಆದರೆ ಈ ಪಂಡಿತ–ಪಾಮರರ ನಡುವೆ ಮೂರನೆಯ (ಮಧ್ಯಮ?) ವರ್ಗವೊಂದಿದೆ. ಅದು ಪಂಡಿತ–ಪಾಮರರ ವರ್ಗ. ಅದಕ್ಕೆ ಪಾಮರ–ಪಂಡಿತರ ವರ್ಗವೂ ಸೇರ್ಪಡೆ ಆಗುತ್ತದೆ. ಇಂಥವರಿಗೆ ಬೇಂದ್ರೆ–ಪುಟ್ಟಪ್ಪ–ಅಡಿಗ ಪ್ರಭೃತಿಗಳು ಭಾರಿ ದೊಡ್ಡ ಕವಿಗಳು. ಲಾಯನ್ಸ್, ರೋಟರಿ, ಜೇಸಿಸ್ ಆದಿ, ಸುಪ್ರತಿಷ್ಠ ಮಂಡಳಿಗಳಲ್ಲಿ ಸತ್ಕಾರಕೂಟಕ್ಕೆ ಯೋಗ್ಯರು. ಆದರೆ ಈ ಭೋಜ(ನ) ರಾಜರು ಈ ಆಸ್ಥಾನ ಕವಿಗಳನ್ನು ಎಷ್ಟರಮಟ್ಟಿಗೆ ಬಲ್ಲರು? ಎಷ್ಟರಮಟ್ಟಿಗೆ ಓದಿಕೊಂಡಿರುವರು? ಬೇಂದ್ರೆ–"ಮೂಡಲ ಮನೆಯಾ.." ಅಲ್ಲಾ "ಹುಬ್ಬಳ್ಳಿಯಾಂವಾ.....", ಪುಟ್ಟಪ್ಪ–"ಬಾಗಿಲೊಳು ಕೈಮುಗಿದು....." ಅಲ್ಲ "ದೋಣಿ ಸಾಗಲಿ.....", ಅಡಿಗ–"ಓ ಮೋಹನ ಮುರಲಿ....." ಹೀಗೆ ಒಂದೊಂದು ಹಾಡಿನಿಂದ ಒಬ್ಬೊಬ್ಬ ಕವಿ ಸುಪರಿಚಿತ. ಅದು ಹೇಗೆ? ಓದಿ ಅಲ್ಲ, ಕೇವಲ ಕೇಳಿ. ಸಿನೇಮಾಗಳಲ್ಲಿ ಹಾಡಿದ್ದು, ಮೈಕು ಕಿರುಚಿದ್ದು ಕೇಳಿ–ಅಲ್ಲ ಕಿವಿಗೆ ಬಿದ್ದು! ಇಂದು ಯಾವ ಸಾಂಸ್ಕೃತಿಕ ಮೂಲ್ಯವನ್ನೂ ಅರಿಯದ ವಸ್ತು–ವ್ಯಕ್ತಿ–ವಿಷಯಗಳ ಕೇವಲ ಪೇಟೆಯ ಬೆಲೆಯನ್ನಷ್ಟೇ ಬಲ್ಲ ಸಾವಿರಗಟ್ಟಲೆ ಅಶಿಕ್ಷಿತ ವಿದ್ಯಾವಂತರಿಗೆ, ಅಸಂಸ್ಕೃತ ಸುಶಿಕ್ಷಿತರಿಗೆ ಹೊಸಗನ್ನಡದ ಈ ಸಂಪತ್ತಿನ, ಈ ಶ್ರೀಮಂತಿಕೆಯ ಪರಿಚಯವನ್ನು ಯಾರು ಹೇಗೆ ಮಾಡಿಕೊಡಬೇಕು?

ಬ್ರಹ್ಮಾನಂದಕ್ಕಿಂತ ಈ ಕಾವ್ಯಾನಂದ 'ಕಿಂಚಿದೂನ'ವಂತೆ. ಅದು ನಿರ್ವಿಕಲ್ಪ ಸಮಾಧಿ. ಇದು ಸವಿಕಲ್ಪ, ಕಾವ್ಯಾನಂದವನ್ನು ಸವಿಯುವಾಗ ಸಹೃದಯನು, ರಸಿಕನು ಪೂರ್ತಿ ತನ್ಮಯನಾಗುವದಿಲ್ಲ. ಆತ ಆ ಮಟ್ಟಿಗೆ ಹೊರ ಪ್ರಪಂಚಕ್ಕೆ ನಿಸ್ಸಂಗಿ. ಆದರೂ ಅವನಲ್ಲಿ ಸಾಕ್ಷಿತ್ವ ಆಗ ಜಾಗೃತವಾಗಿಯೇ ಇರುತ್ತದೆ. ಆತ್ಮಸಾಕ್ಷಾತ್ಕಾರ, ಆತ್ಮೋದ್ಧಾರ ಮುಂತಾದ ತುರೀಯ ಪಾರಮಾರ್ಥಿಕ ಗುರಿಗೆ ಒಯ್ಯದಿದ್ದರೆ, ಈ ಕಾವ್ಯದ ಈ ಆನಂದವಾದರೂ ಯಾಕೆ ಬೇಕು? "ಕ್ಯಾನ್ ಪೊಯೆಟ್ರಿ ಸೇವ್ ಎ ಸೋಲ್?" (ಕಾವ್ಯ ಒಂದು ಆತ್ಮವನ್ನು ಉದ್ಧರಿಸಬಲ್ಲದೋ?) ಎಂದು ಒಬ್ಬರು ಕೇಳಿದಾಗ, ಒಬ್ಬ ತತ್ವವೇತ್ತ ಹೀಗಂದ: "ಇಟ್ ಕ್ಯಾನಾಟ್ ಸೇವ್ ದ ಸೋಲ್, ಬಟ್ ಇಟ್ ಕ್ಯಾನ್ ಮೇಕ್ ದ ಸೋಲ್ ವರ್ಥ್ ಸೇವಿಂಗ್!" ("ಅದು ಆತ್ಮವನ್ನು ಉದ್ಧರಿಸಲಾರದು. ಆದರೆ ಅದು ಆತ್ಮವನ್ನು ಉದ್ಧಾರಕ್ಕೆ ಅರ್ಹವಾಗಿ ಮಾಡಬಲ್ಲದು.")

ಜೀವವನ್ನು ಆತ್ಮವಾಗಿ, ವ್ಯಕ್ತಿಯನ್ನು ಆತ್ಮವಂತನಾಗಿ ಮಾಡಬಲ್ಲ ಸಂಸ್ಕಾರವನ್ನು–ಪ್ರಜ್ಞೆಯ ಆಳವನ್ನು, ಹೃದಯದ ವೈಶಾಲ್ಯವನ್ನು, ಸಂವೇದನೆಯ ಸೂಕ್ಷ್ಮತೆಯನ್ನು ತಿಳಿವಿನ ತೀಕ್ಷ್ಣತೆಯನ್ನು ಕೊಡಬಲ್ಲ ಪ್ರಭಾವಗಳಲ್ಲಿ ಈ ಕಾವ್ಯಾನಂದವು ಒಂದು–ಅಲ್ಲ, ಭಕ್ತಿಯೋಗದಂತೆಯೇ ಸುಲಭದ ಸಾಧನೆ.

ಆದ್ದರಿಂದ ಇದರ ಆವಿಷ್ಕಾರಕ್ಕೆ ಈ ಪಂಡಿತ ಪಾಮರರನ್ನೂ ಪಾಮರ-ಪಂಡಿತರನ್ನೂ ಒಗ್ಗುವಂತೆ ಮಾಡದಿದ್ದರೆ ಲೋಕದಲ್ಲಿ ಕಾವ್ಯಕ್ಕಾಗಲಿ, ಆತ್ಮಸಂಸ್ಕಾರಕ್ಕಾಗಲಿ ಉಳಿಗಾಲ ಕಾಣುವದಿಲ್ಲ. ಅಂತೆಯೇ ಅಂಬಿಕಾತನಯರು ಒಂದೆಡೆಗೆ ಅಪಾರ್ಥ ಸಮೀಕ್ಷಕರನ್ನು ಜರೆದಂತೆಯೇ ರಸಿಕ ಭೃಂಗಕ್ಕೆ ತನ್ನ ಅಂತರಂಗವನ್ನೇ ತೆರೆದು, ಹೃದಯ-ಸಮುದ್ರದ ನಾದಲೀಲೆಗೆ ಮುಕ್ತಕಂಠದ ಕರೆ ನೀಡಿದ್ದಾರೆ-ಅದುವೆ "ಕಂಪಿನ ಕರೆ".

ಕವನಕೋಶವೆಂಬ ಕಮಲ ಗರ್ಭದಲ್ಲಿ ಅರ್ಥದ, ಮರ್ಮದ, ಭಾವದ, ರಸದ ಪರಾಗ ಅಡಗಿದೆ. ಅದಕ್ಕೆ ಈ ರಸಿಕ ಭೃಂಗದ ಮುಖ ಸ್ಪರ್ಶವೇ ಬೇಕು-ಹೊಸ ಸೃಷ್ಟಿಯು ಹೊರಬರಲು. ಕವಿಗೆ ಈ ಹೊಸ ಸೃಷ್ಟಿಯೇ ಮುಖ್ಯ. ಈ ಬಾಳಿನ ಮರದಲ್ಲಿ ಯಾವದು ಬೀಜವಾಗುವದಿಲ್ಲವೋ ಅದು ಗೊಬ್ಬರವಾಗುತ್ತದೆ - ಅಂದರೆ ಆ ಮೂಲಕ ಬೀಜಕ್ಕೆ ಪೋಷಕ, ಹೊಸ್ಸೃಷ್ಟಿಗೆ ಸಾಧಕವಾಗುತ್ತದೆ. ಈ ಕವಿಯು ತನ್ನ ನವ ತಾರುಣ್ಯದ ಭರದಲ್ಲಿಯೇ, ಆರಂಭದಲ್ಲಿಯೇ ಬರೆದ ಇಂಗ್ಲೀಷ್ ಕವನವೊಂದರಲ್ಲಿ ಬರೆದಿದ್ದರು: "ಮೈನ್ ಈಜ್ ಬಟ್ ಎ ಫ್ಲಾವರ್ಸ್ ವಿಶ್। ಟು ಲೀವ್ ಸಂ ಸೀಡ್ಸ್ ಬಿಹೈಂಡ್।" ("ನನ್ನದು ಹೂವಿನ ಬಯಕೆ। ಕೇವಲ ಬಿಡಲು ಬೀಜ ಕೆಲವು") ಈ ಕಾವ್ಯಪುಷ್ಪವು ರಸದ ಫಲವನ್ನು ಕೊಡಬೇಕಾದರೆ, ಹೂವು ಬಿಡುವ ಮೊದಲು ಬೀಜ ಬಿಡಬೇಕಾದರೆ, ಅಲ್ಲಿ ನಡೆಯಬೇಕು ರಸಪರಿಚಯದ, ಕಾವ್ಯಸಮೀಕ್ಷೆಯ ಕ್ರಿಯೆ. ಒಂದು ಬಗೆಯ ಪ್ರಸೂತಿಯ ಪ್ರಕ್ರಿಯೆ. ಆ ಕ್ರಿಯೆಗೆ ಸೂಲಗಿತ್ತಿ ಆಗುವದೇ ವಿಧಾಯಕ ವಿಮರ್ಶೆಯ ಕೆಲಸ. ತನ್ನ ವಜ್ರಮುಖವನ್ನು ಚಾಚಿ ಈ ಹೂವು-ಹೂವನ್ನು ಮೂಸಿ, ಮುತ್ತಿಟ್ಟು, ಅದರ ನೀರು ಹೀರಿಕೊಳ್ಳುವ 'ಮಧುವ್ರತ' ಈ ಕೆಲಸದ ಕಸಬುಗಾರಿಕೆ. ಪ್ರತಿ ಹೂವಿನಲ್ಲಿಯೂ ಆ 'ನೀರು' ಇರುತ್ತದೆಂದು ಅಲ್ಲ, ಕೆಲವು ಜೇನು ಹನಿಗಾಗಿ ಈ ರಸಿಕ ಭ್ರಮರವನ್ನು ವಿಭ್ರಮಗೊಳಿಸುತ್ತವೆ. "ಒಂದರೊಲು ಒಂದಿಲ್ಲ। ಒಂದರೊಳು ಕುಂದಿಲ್ಲ।" ಯಾವ ಕೃತಿಯಿಂದ ಏನು ಎಷ್ಟು ಪಡೆಯುವದು-ಎಂಬುದನ್ನು ಕಾಣುವ ಕಣ್ಣು ನಾವು ಪಡೆದು ಬಂದವರಾಗಿರಬೇಕು. ಅದು ಕಂಡವರಿಗಲ್ಲ, ಕಂಡವರಿಗಷ್ಟೇ ಕಾಣುವ ಬಿಂಬ.

*

## 'ಕವನ ಕಣ್ಣು'

ಮನೆಗೆ ಒಂದು ಬಾಗಿಲು ಇರುತ್ತದೆ, ಮನೆ ಮಂದಿ ಒಳ-ಹೊರಗೆ ಬಂದು ಹೋಗಲು. ಹೊರಗೆ ಅಂಗಳಕ್ಕೆ ಇನ್ನೂ ಅಗಲವಾದ ಗೇಟು ಇರುತ್ತದೆ. ಇನ್ನೂ ಹೆಚ್ಚು ಜನ ಹೊರೆ-ಗಿರೆ ಸಾಗುವಂತೆ. ಇನ್ನು ಕಾರು, ವ್ಯಾನು ಒಳತರಲಿಕ್ಕೆ ಗ್ಯಾರೇಜಿಗೆ ಇನ್ನೂ ದೊಡ್ಡ ದ್ವಾರವಿರುತ್ತದೆ. ಆನೆ, ಕುದುರೆ, ದಂಡುಗಳ ಸಂಚಾರಕ್ಕಾಗಿ ಕೋಟೆಯ ಅಗಸೆ ಇನ್ನೂ ಭವ್ಯ. ಆದರೆ ನಮ್ಮ ಈ ಕಣ್ಣು? ಇದೆಷ್ಟು ಸಣ್ಣ ರಂಧ್ರ! ಆದರೆ ಇದರೊಳಗಿಂದ ಮಗುವೂ ಹಾಯುತ್ತದೆ. ಮಂದಿನೂ ಹಾಯ್ತಾರೆ. ಆನೆ, ಬಂಡಿ, ತೇರು, ಕಾರು, ಬಸ್ಸು, ಲಾರಿ, ರೈಲು – ಎಲ್ಲವೂ ಸಕಲ ಚರಾಚರ ಸೃಷ್ಟಿಪ್ರಪಂಚವೇ ಒಳಗೆ ಪ್ರವೇಶಿಸುತ್ತದೆ. ಆಯಾ ವಸ್ತುವಿಗಾಗಿ ಬೇರೆ ಬೇರೆ ಆಯ-ಆಕಾರದ ಕಣ್ಣು ನಮಗೆ ಇಲ್ಲ. ಇಷ್ಟು ವರ್ಣನೆಯಿಂದ ಬೇಂದ್ರೆಯವರು ನನ್ನೊಡನೆ ಮಾತು ಮುಂದುವರೆಸಿದರು. (ಇಪ್ಪತ್ತು ವರ್ಷಗಳಿಗೂ ಹಿಂದೆ). "ಹಾಗೆಯೇ ಒಂದು ಕವನ. ಇದು ಒಂದು ಕಣ್ಣು ಇದ್ದಂತೆ. ಇದರೊಳಗಿಂದ ಸಣ್ಣ-ದೊಡ್ಡ, ಸ್ಥೂಲ-ಸೂಕ್ಷ್ಮ, ಪಿಂಡಾಂಡ-ಬ್ರಹ್ಮಾಂಡ ಎಲ್ಲವನ್ನೂ ನಾವೂ ಗ್ರಹಿಸಬಹುದು. ನಾವು ಒಂದು ಕವನದಿಂದ ತಿಳಿದಷ್ಟು ಅರ್ಥ, ಪಡೆದಷ್ಟು ಆಶಯ ಅದು ನೀಡಬಲ್ಲದು." ಇದಕ್ಕೂ ತಿಳಿಯಾಗಿ ಕಾವ್ಯದ ರಸಗ್ರಹಣದ ಮರ್ಮಜ್ಞತೆಯ ವಿವರಣೆ ಇನ್ನೆಲ್ಲಿಯೂ ಇನ್ನಾರಿಂದಲೂ ನಾನು ಕೇಳಿಲ್ಲ. ಒಂದು ಕವನಕ್ಕೆ ಎರಡು ಮಗ್ಗಲು : ನಾಣ್ಯದ ಎರಡು ಮೈಯಂತೆ. ಒಂದು ಅಭಿವ್ಯಕ್ತಿ, ಇನ್ನೊಂದು ನಿವೇದನೆ. (ಇದನ್ನೇ ಈಚಿನ ಕೆಲ ನವ್ಯವಿಮರ್ಶಕರು 'ಸಂವಹನ'ವೆನ್ನುವದುಂಟು. ಈ ಹೊಸ ಶಬ್ದ ಅಷ್ಟೊಂದು ಪ್ರಶಸ್ತವೂ ಉಚಿತವೂ ಅನಿಸುವದಿಲ್ಲ.) ಅಭಿವ್ಯಕ್ತಿ ಕವಿಯ ಸತ್ವದ ಆವಿಷ್ಕಾರ; ನಿವೇದನೆ ಸಹೃದಯನ, ರಸಿಕನ ಶಕ್ತಿಯ ಪರಿಷ್ಕಾರ. ಬೆಳಕಿನ ಒಂದು ಕಂಬಿಯನ್ನು-ಅದೆಷ್ಟೇ ಉಜ್ವಲ ಪ್ರಖರವಿದ್ದರೂ ಬಂಡೆಯ ಮೈ-ತನ್ನೊಳಗಿಂದ ಹಾಯಗೊಡಲಿಕ್ಕಿಲ್ಲ. ಆದರೆ ಕಾಜು ಅದನ್ನು ಇದ್ದಕ್ಕಿದ್ದಂತೆ ಆರುಪಾರು ಹೋಗಲು ಬಿಡುವದು. ಕನ್ನಡಿ ಅದನ್ನು ಪ್ರತಿಬಿಂಬಿಸಬಲ್ಲದು. ಅದೇ ಒಂದು ಲೋಲಕ ಅದನ್ನು ಪೃಥಕ್ಕರಿಸಿ ಏಳು ಬಣ್ಣಗಳನ್ನು ಹೊರತೂರಬಲ್ಲದು. ಕವನದ ಆಸ್ವಾದನೆ, ರಸಪರಿಚಯ ಮತ್ತು ವಿಮರ್ಶೆ-ವಿಶ್ಲೇಷಣೆ ಹೆಚ್ಚು ಕಡಿಮೆ ಇದೇ ಪ್ರಕಾರ.

ಒಂದೇ ಕವನವನ್ನು ಪ್ರಾಥಮಿಕ, ಮಾಧ್ಯಮಿಕ, ಉಚ್ಚ ಹಾಗೂ ಸ್ನಾತಕೋತ್ತರ ಶಿಕ್ಷಣದ ಪಾತಳಿಯಿಂದ ಅಭ್ಯಸಿಸುವದು ಸಾಧ್ಯ. ಆಯಾ ಹಂತದಲ್ಲಿ ಅಭ್ಯಸನದ ಹದ-ಹವಣಿಕೆ-ಹಂಚಿಕೆಗಳು ಅವಶ್ಯವಾಗಿಯೂ ಬೇರೆ ಬೇರೆ. ಆದರೂ

ಕೆಳಗಿನ ಪಾತಳಿಗಳನ್ನು ಒಳಗೊಂಡೇ ಮೇಲಿನ ಪಾತಳಿಯಲ್ಲಿ ಕೃತಿಯ ಪರಾಮರ್ಶೆ ನಡೆಯುತ್ತದೆ–ನಡೆಯಬೇಕು. ನೀರಿನ ಹಾಳೆಯ ಮೇಲೆ ಒಂದು ಹರಳು ಒಗೆದರೆ, ಹುಟ್ಟಿ ಹಬ್ಬುವ ಸುತ್ತಲೆಗಳಂತೆ, ಈ ಕಾವ್ಯವ್ಯಾಸಂಗ ಮತ್ತು ಅದರ ಅಂಗವಾದ ವಿಮರ್ಶೆ ಹೆಚ್ಚು ಹೆಚ್ಚು ಬಿತ್ತರಗೊಳ್ಳುವ ವಲಯಗಳಾಗಿ ಹಬ್ಬಬೇಕು.

ಇದು ಬಿಡಿ ಕವನಗಳ ಬಗೆಗೆ ಹೇಗೋ, ಕವಿಯ ಒಟ್ಟು ಕಾವ್ಯದ ಬಗೆಗೂ, ಅದರಿಂದ ನಿಷ್ಪನ್ನವಾಗುವ ಅವನ ಕಾವ್ಯಾತ್ಮಕ ವ್ಯಕ್ತಿತ್ವದ ಬಗೆಗೂ ಸಲ್ಲುವ ವಿಧಾನ. ಇದು ತುಂಬ ಕ್ಲಿಷ್ಟವಾದ ಕೆಲಸ. 'ಅಂಬಿಕಾತನಯದತ್ತ'ರಂಥ ಅತ್ಯಂತ ಸಂಕೀರ್ಣ ಹಾಗೂ ಪ್ರಗಲ್ಭ–ಪ್ರಬುದ್ಧ ವ್ಯಕ್ತಿತ್ವದ ಬಗೆಗಂತೂ ಇದು ಇನ್ನಷ್ಟು ದುರ್ಧರವಾದ ಜವಾಬುದಾರಿ. ಹಿಂದೊಮ್ಮೆ ಒಂದು ಕವಿಗೋಷ್ಠಿಯಲ್ಲಿ ಅಧ್ಯಕ್ಷರಾದ ಬೇಂದ್ರೆಯವರ ಪರಿಚಯ ಮಾಡಿಕೊಡುತ್ತ ವಿ. ಸೀತಾರಾಮಯ್ಯ ಅಂದಿದ್ದರು: "ಬೇಂದ್ರೆ ಒಂದು ಬೆಂಕಿ, ಅದು ಶಾಖ ಕೊಡುತ್ತದೆ. ಬೆಳಕು ಕೊಡುತ್ತದೆ. ಪಾಕ ಮಾಡುತ್ತದೆ. ಪರಿಶುದ್ಧ–ಪಾವನಗೊಳಿಸುತ್ತದೆ!" ಈ ವ್ಯಕ್ತಿತ್ವದ ಇವೆಲ್ಲ ಪಂಚಮುಖಗಳನ್ನೂ ಅವರ ಕಾವ್ಯದೊಳಗಿಂದಲೇ ಸಮರ್ಥಿಸಿ ವಿವರಿಸುತ್ತ ಹೋದರೆ, ಅದೇ ಇನ್ನೊಂದು ಉದ್ಗ್ರಂಥವಾದೀತು!

ಬೇಂದ್ರೆ ಕವನ ಅರ್ಥವಾಗುವುದಿಲ್ಲ, ಅದೊಂದು ಕಬ್ಬಿಣದ ಕಡಲೆ. ಎಂದೆಲ್ಲ ಹೊಗಳಿಯೋ ತೆಗಳಿಯೋ ಹೇಳುವುದುಂಟು. ಯಾವ ಕಡಲೆಯಾದರೂ ಮೊದಲು ನಮ್ಮ ಬಾಯಿಯಲ್ಲಿ ಅದನ್ನು ನುರಿಸಲು ಹಲ್ಲು ಇರಬೇಕಷ್ಟೇ! ಹಲ್ಲಿಲ್ಲದವರಿಗೆ ಯಾವ ಕಡಲೆಯೂ ಕಬ್ಬಿಣವೇ. ಕಾವ್ಯವನ್ನು ನುರಿಸಿಕೊಳ್ಳುವ ಬಲವುಳ್ಳ ಹಲ್ಲು ಮೊದಲು ನಮ್ಮಲ್ಲಿ ಬೆಳೆದಿರಬೇಕು. ಬರಿ ಬಾಲ್ಯದ ಹಾಲು ಹಲ್ಲು ಇಲ್ಲಿ ಕೆಲಸಕ್ಕೆ ಬಾರದು.

"ನೆಲವೆಂಬುದು ಬರಿಮಣ್ಣಲ್ಲ
ಅದು ನೋಡುವ ಕಣ್ಣಿಲ್ಲ!"
.......... "ಇದು ಬರಿ ಬೆಳಗಲ್ಲೋ ಅಣ್ಣಾ!"

ಎಂದೆಲ್ಲ ಹೇಳುವಾಗ ಕವಿಯು ನಮ್ಮಲ್ಲಿ ಒಂದು ವಿಶೇಷ ದೃಷ್ಟಿಯನ್ನು ಅಪೇಕ್ಷಿಸುತ್ತಾನೆ. ಆ ಕಣ್ಣು ಇದ್ದರೇನೇ

"ಇದ್ದದ್ದು ಮರಿಯೋಣ
ಇಲ್ಲದ್ದು ತೆರಿಯೋಣ
ಹಾಲ್ಜೇನು ಸುರಿಯೋಣ.....

